KA / BG-GPO/2515/WPP-47/2006-2008



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೧ | ಬೆಂಗಳೂರು, ಗುರುವಾರ, ಆಗಸ್ಟ್ ೩, ೨೦೦೬ (ಶ್ರಾವಣ ೧೨, ಶಕ ವರ್ಷ ೧೯೨೮) | ಸಂಚಿಕೆ ೩೧ |
|---|---|---|

## ಭಾಗ - ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾಗಿ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಒಳಾಡಳಿತ ಸಚಿವಾಲಯ

**ವಿಷಯ:** ರಾಜ್ಯದ 30 ಶೀಘ್ರ ವಿಲೇವಾರಿ ನ್ಯಾಯಾಲಯಗಳಿಗೆ ಹೊಂದಿಕೊಂಡಂತೆ ಸೃಜಿಸಲಾಗಿರುವ 30 ಸರ್ಕಾರಿ ಅಭಿಯೋಜಕರ ಹುದ್ದೆಗಳನ್ನು ಮುಂದುವರೆಸುವ ಕುರಿತು.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ:ಒಇ 32 ಪಿಪಿಇ 2004, ದಿನಾಂಕ 25.1.2005.
2. ತಿದ್ದೋಲೆ ಸಂಖ್ಯೆ: ಒಇ 58 ಪಿಪಿಇ 2005 ದಿನಾಂಕ:7.3.05.
3. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ನಂ. ಡಿಪಿಎನ್/ಸಿಶಾ -1/124/ 2005-06, ದಿನಾಂಕ:10.8.2005.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಸರ್ಕಾರದ ಆದೇಶದಲ್ಲಿ ರಾಜ್ಯದಲ್ಲಿ ಸೃಜಿಸಲಾಗಿರುವ 30 ಶೀಘ್ರ ವಿಲೇವಾರಿ ನ್ಯಾಯಾಲಯಗಳಲ್ಲಿ ರೂ.9580-260-10880-320-13440-380-14200ರ ವೇತನ ಶ್ರೇಣಿಯಲ್ಲಿ 30 ಸರ್ಕಾರಿ ಅಭಿಯೋಜಕರ ಹುದ್ದೆಗಳನ್ನು ದಿನಾಂಕ:12.11.2004 ರಿಂದ ಜಾರಿಗೆ ಬರುವಂತೆ ಶೀಘ್ರ ವಿಲೇವಾರಿ ನ್ಯಾಯಾಲಯಗಳ ಕಾರ್ಯ ಮುಗಿಯುವವರೆಗೆ ಅಥವಾ ಒಂದು ವರ್ಷದ ಅವಧಿಯವರೆಗೆ, ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ತಾತ್ಕಾಲಿಕವಾಗಿ ಸೃಜಿಸಿ ಮಂಜೂರಾತಿಯನ್ನು ನೀಡಲಾಗಿರುತ್ತದೆ.

ಮೇಲೆ ಓದಲಾದ (2) ರ ದಿನಾಂಕ:10.8.2005ರ ಪತ್ರದಲ್ಲಿ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರು ಓದಲಾದ (1)ರ ಸರ್ಕಾರದ ಆದೇಶದಲ್ಲಿ ಸೃಜಿಸಲಾಗಿದ್ದ ಹುದ್ದೆಗಳ ಕಾರ್ಯಾವಧಿಯು ದಿನಾಂಕ:11.11.2005ಕ್ಕೆ ಮುಕ್ತಾಯಗೊಳ್ಳಲಿದೆ. ಕಾರಣ, ಈ ಹುದ್ದೆಗಳನ್ನು ಸದರಿ ಶೀಘ್ರ ವಿಲೇವಾರಿ ನ್ಯಾಯಾಲಯಗಳ ಕಾರ್ಯಾವಧಿಯು ಮುಗಿಯುವವರೆಗೆ ಮುಂದುವರೆಸುವ ಅಗತ್ಯತೆ ಇರುವುದರಿಂದ ದಿನಾಂಕ:12.11.2005 ರಿಂದ 5 ವರ್ಷಗಳ ಅವಧಿಗೆ ಮುಂದುವರೆಸಲು ಅಥವಾ ಸದರಿ ಶೀಘ್ರ ವಿಲೇವಾರಿ ನ್ಯಾಯಾಲಯಗಳ ಕಾರ್ಯಾವಧಿಯು ಮುಗಿಯುವವರೆಗೆ ಮುಂದುವರೆಸಲು, ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮುಂದುವರೆಸಿ ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 775 ಪಿಪಿಇ 2005, ಬೆಂಗಳೂರು, ದಿನಾಂಕ: 19ನೇ ಜೂನ್ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ, 30 ಸರ್ಕಾರಿ ಅಭಿಯೋಜಕರ ಹುದ್ದೆಗಳನ್ನು ಈ ಕೆಳಕಂಡ ಶೀಘ್ರ ವಿಲೇವಾರಿ ನ್ಯಾಯಾಲಯಗಳಲ್ಲಿ ದಿನಾಂಕ:12.11.2005ರಿಂದ ಒಂದು ವರ್ಷದವರೆಗೆ ಅಥವಾ ಸಂಬಂಧಪಟ್ಟ ನ್ಯಾಯಾಲಯಗಳು ಅಸ್ತಿತ್ವದಲ್ಲಿರುವವರೆಗೆ, ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮುಂದುವರೆಸಲು ಸರ್ಕಾರವು ಮಂಜೂರಾತಿ ನೀಡಿದೆ.

| | | | |
|---|---|---|---|
| 1. | 3ನೇ ಶೀಘ್ರ ವಿಲೇವಾರಿ ನ್ಯಾಯಾಲಯ, ಬೀದರ್. | 2. | 3ನೇ ಶೀಘ್ರ ವಿಲೇವಾರಿ ನ್ಯಾಯಾಲಯ, ಬೆಂಗಳೂರು ನಗರ. |
| 3. | 1ನೇ ಶೀಘ್ರ ವಿಲೇವಾರಿ ನ್ಯಾಯಾಲಯ, ಹಾವೇರಿ. | 4. | 4ನೇ ಶೀಘ್ರ ವಿಲೇವಾರಿ ನ್ಯಾಯಾಲಯ, ಬೆಂಗಳೂರು ನಗರ. |
| 5. | 1ನೇ ಶೀಘ್ರ ವಿಲೇವಾರಿ ನ್ಯಾಯಾಲಯ, ರಾಮದುರ್ಗ. | 6. | 5ನೇ ಶೀಘ್ರ ವಿಲೇವಾರಿ ನ್ಯಾಯಾಲಯ, ಬೆಂಗಳೂರು ನಗರ. |
| 7. | 3ನೇ ಶೀಘ್ರ ವಿಲೇವಾರಿ ನ್ಯಾಯಾಲಯ, ಶಿವಮೊಗ್ಗ. | 8. | 6ನೇ ಶೀಘ್ರ ವಿಲೇವಾರಿ ನ್ಯಾಯಾಲಯ, ಬೆಂಗಳೂರು ನಗರ. |
| 9. | 3ನೇ ಶೀಘ್ರ ವಿಲೇವಾರಿ ನ್ಯಾಯಾಲಯ, ಬೆಂಗಳೂರು ನಗರ. | 10. | 1ನೇ ಶೀಘ್ರ ವಿಲೇವಾರಿ ನ್ಯಾಯಾಲಯ, ಜಮಖಂಡಿ. |

| | | | |
|---|---|---|---|
| 11. | 2ನೇ ಶೀಘ್ರ ವಿಲೇವಾರಿ ನ್ಯಾಯಾಲಯ, ಬಾಗಲಕೋಟೆ. | 12. | 1ನೇ ಶೀಘ್ರ ವಿಲೇವಾರಿ ನ್ಯಾಯಾಲಯ, ಹೊಸಪೇಟೆ. |
| 13. | 8ನೇ ಶೀಘ್ರ ವಿಲೇವಾರಿ ನ್ಯಾಯಾಲಯ, ಬೆಂಗಳೂರು ನಗರ. | 14. | 2ನೇ ಶೀಘ್ರ ವಿಲೇವಾರಿ ನ್ಯಾಯಾಲಯ, ಬಿಜಾಪುರ. |
| 15. | 9ನೇ ಶೀಘ್ರ ವಿಲೇವಾರಿ ನ್ಯಾಯಾಲಯ, ಬೆಂಗಳೂರು ನಗರ. | 16. | 10ನೇ ಶೀಘ್ರ ವಿಲೇವಾರಿ ನ್ಯಾಯಾಲಯ, ಬೆಂಗಳೂರು ನಗರ. |
| 17. | 2ನೇ ಶೀಘ್ರ ವಿಲೇವಾರಿ ನ್ಯಾಯಾಲಯ, ಬೆಂಗಳೂರು ಗ್ರಾಮಾಂತರ, ಬೆಂಗಳೂರು. | 18. | 3ನೇ ಶೀಘ್ರ ವಿಲೇವಾರಿ ನ್ಯಾಯಾಲಯ, ಬೆಂಗಳೂರು ಗ್ರಾಮಾಂತರ, ಬೆಂಗಳೂರು. |
| 19. | 4ನೇ ಶೀಘ್ರ ವಿಲೇವಾರಿ ನ್ಯಾಯಾಲಯ, ಬೆಳಗಾವಿ. | 20. | 4ನೇ ಶೀಘ್ರ ವಿಲೇವಾರಿ ನ್ಯಾಯಾಲಯ, ಬೆಂಗಳೂರು ಗ್ರಾಮಾಂತರ, ಬೆಂಗಳೂರು. |
| 21. | 2ನೇ ಶೀಘ್ರ ವಿಲೇವಾರಿ ನ್ಯಾಯಾಲಯ, ಕಾರವಾರ. | 22. | 3ನೇ ಶೀಘ್ರ ವಿಲೇವಾರಿ ನ್ಯಾಯಾಲಯ, ರಾಯಚೂರು. |
| 23. | 1ನೇ ಶೀಘ್ರ ವಿಲೇವಾರಿ ನ್ಯಾಯಾಲಯ, ಚಾಮರಾಜನಗರ. | 24. | 5ನೇ ಶೀಘ್ರ ವಿಲೇವಾರಿ ನ್ಯಾಯಾಲಯ, ಬೆಂಗಳೂರು ಗ್ರಾಮಾಂತರ, ಬೆಂಗಳೂರು. |
| 25. | 1ನೇ ಶೀಘ್ರ ವಿಲೇವಾರಿ ನ್ಯಾಯಾಲಯ, ಕೊಳ್ಳೇಗಾಲ. | 26. | 5ನೇ ಶೀಘ್ರ ವಿಲೇವಾರಿ ನ್ಯಾಯಾಲಯ, ಮೈಸೂರು. |
| 27. | 4ನೇ ಶೀಘ್ರ ವಿಲೇವಾರಿ ನ್ಯಾಯಾಲಯ, ಕೋಲಾರ. | 28. | 3ನೇ ಶೀಘ್ರ ವಿಲೇವಾರಿ ನ್ಯಾಯಾಲಯ, ಮಂಡ್ಯ. |
| 29. | 4ನೇ ಶೀಘ್ರ ವಿಲೇವಾರಿ ನ್ಯಾಯಾಲಯ, ಮಂಡ್ಯ. | 30. | 1ನೇ ಶೀಘ್ರ ವಿಲೇವಾರಿ ನ್ಯಾಯಾಲಯ, ಚಿಕ್ಕಬಳ್ಳಾಪುರ. |

ಸದರಿ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ:ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ:10.7.1996ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ. ಕುಲಕರ್ಣಿ**

ಪಿ.ಆರ್. 1005

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಕಾ. ಮತ್ತು ಸು. ಮತ್ತು ಅಭಿಯೋಗಗಳು)

**ವಿಷಯ:** ಶ್ರೀ ಎಫ್.ಯು. ನಾಯಕವಾಡಿ, 3ನೇ ಅಧಿಕ ಸರ್ಕಾರಿ ಅಭಿಯೋಜಕರು, ಬೆಳಗಾವಿ ಇವರ ವಿರುದ್ಧ ಇಲಾಖಾ ವಿಚಾರಣೆ ಬಗ್ಗೆ.

**ಓದಲಾಗಿದೆ:**

1. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ಸಂಖ್ಯೆ ಡಿಪಿಎನ್:ಆದಾ/48/ 2003-04 ದಿ:3.9.2004.
2. ಕಾರಣ ಕೇಳುವ ತಿಳುವಳಿಕೆ ಪತ್ರ ಸಂ:ಒಇ 165 ಪಿಪಿಇ 2005 ದಿನಾಂಕ:29.3.2005
3. ಅಧಿಕಾರಿಯ ಸಮಜಾಯಿಷಿ ಪತ್ರ ದಿನಾಂಕ:3.11.2005.

**ಪ್ರಸ್ತಾವನೆ**

ಮೇಲೆ (1)ರಲ್ಲಿ ಓದಲಾಗಿರುವ ದಿನಾಂಕ:3.9.2004ರ ಪತ್ರದಲ್ಲಿ ಶ್ರೀ ಎಫ್.ಯು. ನಾಯಕವಾಡಿ, 3ನೇ ಅಧಿಕ ಸರ್ಕಾರಿ ಅಭಿಯೋಜಕರು, ಬೆಳಗಾವಿ ರವರು 1) ಬೆಳಗಾವಿ ನಗರದ ನಂ:1915ರ ನಿವೇಶನದಲ್ಲಿ ಎಲ್ಲಾ ಮಾಹಿತಿ/ದಾಖಲೆಯನ್ನು ಒದಗಿಸಿ ಸಕ್ಷಮ ಪ್ರಾಧಿಕಾರದ ಅನುಮತಿ ಪಡೆಯದೇ ಗೃಹನಿರ್ಮಾಣ ಕಾರ್ಯವನ್ನು ಪ್ರಾರಂಭಿಸಿರುತ್ತಾರೆ. 2) ಬೆಳಗಾವಿ ನಗರದ ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾದಿಂದ ಸಕ್ಷಮ ಪ್ರಾಧಿಕಾರದ ಅನುಮತಿ ಪಡೆಯದೇ 4 ಲಕ್ಷ ರೂ. ಸಾಲವನ್ನು ಪಡೆದಿರುತ್ತಾರೆ. 3) ಬೆಂಗಳೂರು ದಕ್ಷಿಣ ತಾಲ್ಲೂಕು, ಕೃಷ್ಣರಾಜಪುರ ಹೋಬಳಿ, ಥಣಿಸಂದ್ರ ಗ್ರಾಮ, ಮನೆ ನಂ. 2397 ನ್ನು ಲಕ್ಷಕ್ಕೆ ಮಾರಾಟ ಮಾಡಲು ಅನುಮತಿ ಪಡೆದು ರೂ. 2,56,000ಕ್ಕೆ ನೋಂದಣಿ ಮಾಡಿಕೊಟ್ಟು ಸರ್ಕಾರವು ನೀಡಿರುವ ಅನುಮತಿಗೆ ವಿರುದ್ಧವಾಗಿ ನಡೆದುಕೊಂಡಿರುತ್ತಾರೆ. ಬೆಂಗಳೂರು ದಕ್ಷಿಣ ತಾಲ್ಲೂಕು, ಕೃಷ್ಣರಾಜಪುರ ಹೋಬಳಿ, ಥಣಿಸಂದ್ರ ಗ್ರಾಮ ಮನೆ ನಂ.2397ನ್ನು ರೂ. 5 ಲಕ್ಷಕ್ಕೆ ಮಾರಾಟ ಮಾಡಲು ಅನುಮತಿ ಪಡೆದು ರೂ.2,56,000ಕ್ಕೆ ಮಾರಾಟ ಮಾಡಿ ರೂ.2,44,000 ಅನಧಿಕೃತವಾಗಿ ಪಡೆದಿರುತ್ತಾರೆ.

ದುರ್ನಡತೆ ಎಸಗಿರುವ ಬಗ್ಗೆ ಕರ್ನಾಟಕ ಸರ್ಕಾರಿ ಸೇವಾ (ನಡತೆ) ನಿಯಮಗಳು 1966ರ ನಿಯಮ 3(iii) ವನ್ನು ಉಲ್ಲಂಘಿಸಿ ಸರ್ಕಾರಿ ನೌಕರರಿಗೆ ರೀತಿಯಲ್ಲಿ ನಡೆದುಕೊಂಡಿರುವುದರಿಂದ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರು, ಇವರ ವಿರುದ್ಧ ಕ್ರಮ ಜರುಗಿಸುವಂತೆ ಸರ್ಕಾರವನ್ನು ಕೋರಿರುತ್ತಾರೆ. ಕರ್ನಾಟಕ ಸರ್ಕಾರಿ ಸೇವಾ ನಿಯಮಾವಳಿ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) 1957 ರ ನಿಯಮ 12 ರ ಅಡಿಯಲ್ಲಿ ಶಿಸ್ತಿನ ಕ್ರಮ ಕೈಗೊಳ್ಳುವ ಬಗ್ಗೆ ಕ್ರಮ ಕೈಗೊಂಡು.

ಮೇಲೆ (2) ರಲ್ಲಿ ಓದಲಾಗಿರುವ ದಿನಾಂಕ: 29.3.2005ರ ಕಾರಣ ಕೇಳುವ ತಿಳುವಳಿಕೆ ಪತ್ರದಲ್ಲಿ ಶ್ರೀ ಎಫ್.ಯು.ನಾಯಕ್‌ವಾಡಿ, 3ನೇ ಅಧಿಕ ಸರ್ಕಾರಿ ಅಭಿಯೋಜಕರು, ಬೆಳಗಾವಿ ಇವರಿಗೆ ಕಾರಣ ಕೇಳುವ ತಿಳುವಳಿಕೆ ಪತ್ರದೊಂದಿಗೆ ದೋಷಾರೋಪಣ ಪಟ್ಟಿ ಅನುಬಂಧ-1 ಮತ್ತು 2ನ್ನು ಜಾರಿಮಾಡಿ ತಮ್ಮ ಮೇಲಿನ ಆಪಾದನೆಗಳನ್ನು ಒಪ್ಪಿಕೊಳ್ಳುವ ಅಥವಾ ನಿರಾಕರಿಸುವ ಬಗ್ಗೆ ಲಿಖಿತ ಹೇಳಿಕೆಯನ್ನು ಸಲ್ಲಿಸುವಂತೆ ತಿಳಿಸಲಾಗಿದ್ದಿತು.

ಮೇಲೆ (3) ರಲ್ಲಿ ಓದಲಾಗಿರುವ 3.11.2005 ರ ಪತ್ರದಲ್ಲಿ ಆರೋಪಿತ ಅಧಿಕಾರಿಯು ಲಿಖಿತ ಹೇಳಿಕೆಯನ್ನು ಸಲ್ಲಿಸಿ ತಮ್ಮ ಮೇಲೆ ಮಾಡಿರುವ ಎಲ್ಲ ಆಪಾದನೆಗಳನ್ನು ಸಂಪೂರ್ಣವಾಗಿ ನಿರಾಕರಿಸಿ ಸರ್ಕಾರದ ವಿದ್ಯುಕ್ತ ಅನುಮತಿ ಬರುವುದನ್ನು ಅನಿವಾರ್ಯ ಮತ್ತು ವ್ಯವಹಾರಿಕ ಒಪ್ಪಂದಗಳ ಕಾರಣದಿಂದಾಗಿ ಕಾಯಲು ಆಗಿರುವುದಿಲ್ಲ. ಸದರಿ ವ್ಯವಹಾರದಲ್ಲಿ ತಾನು ಯಾವುದೇ ಅವ್ಯವಹಾರ ಮಾಡಿರುವುದಿಲ್ಲವೆಂದು ತಿಳಿಸಿ ಉದ್ದೇಶಿತ ಇಲಾಖಾ ವಿಚಾರಣೆಯನ್ನು ಕೈಬಿಡುವಂತೆ ಕೋರಿರುತ್ತಾರೆ. ಆದರೆ ಆರೋಪಿತ ಅಧಿಕಾರಿಯ ರಕ್ಷಣಾ ಹೇಳಿಕೆಯಲ್ಲೇ ಆರೋಪಗಳು ರುಜುವಾತಾಗುತ್ತವೆ ಮತ್ತು ಅವು ಗಂಭೀರವಾಗಿವೆ. ಅವರು ಅರಿವಿನಿಂದಲೇ ಮತ್ತು ಉದ್ದೇಶಪೂರ್ವಕವಾಗಿಯೇ ನಿಯಮಗಳನ್ನು ಉಲ್ಲಂಘಿಸಿದ್ದಾರೆ ಮತ್ತು ನಿಯಮಗಳ ಉಲ್ಲಂಘನೆಯಲ್ಲಿ ಭಾಗಿಯಾಗಿದ್ದಾರೆ. ಆರೋಪಿತ ಸರ್ಕಾರಿ ಅಧಿಕಾರಿಯು ಅಭಿಯೋಗಗಳ ನಿರ್ದೇಶನಾಲಯದ ಅಧಿಕಾರಿಯಾಗಿದ್ದು ಅವರ ನಿಯಮಗಳನ್ನು ತಿಳಿದಿರಬೇಕಾಗಿದ್ದು ಅವುಗಳನ್ನು ಅರಿತಿರುತ್ತಾರೆ. ಆದುದರಿಂದ ಸದರಿ ಆರೋಪಿತ ಸರ್ಕಾರಿ ಅಧಿಕಾರಿಯ ಮೇಲೆ ಕರ್ನಾಟಕ ಸರ್ಕಾರ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 8(iii) ರಲ್ಲಿ ನಮೂದಿಸಿರುವ 2 ವಾರ್ಷಿಕ ವೇತನ ಬಡ್ತಿ ಸಂಚಿತ ಪರಿಣಾಮರಹಿತವಾಗಿ ತಡೆಹಿಡಿಯುವ ದಂಡನೆಯನ್ನು ವಿಧಿಸುವ ಬಗ್ಗೆ ನೇಮಕಾತಿ ಪ್ರಾಧಿಕಾರಿ ಮತ್ತು ಶಿಸ್ತಿನ ಪ್ರಾಧಿಕಾರಿಯು ನಿರ್ಣಯಿಸಿರುತ್ತಾರೆ. ವಿಷಯವನ್ನು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ ಒಇ 165 ಪಿಪಿಇ 2005, ಬೆಂಗಳೂರು, ದಿನಾಂಕ: 22ನೇ ಜೂನ್ 2006**

ಎಫ್.ಯು. ನಾಯಕವಾಡಿ, 3ನೇ ಅಧಿಕ ಸರ್ಕಾರಿ ಅಭಿಯೋಜಕರು, ಬೆಳಗಾವಿ ಇವರ ವಿರುದ್ಧ ಪ್ರಸ್ತಾವನೆಯಲ್ಲಿ ಮಾಡಲಾಗಿರುವ ಆಪಾದನೆಗಳು ಸಾಭೀತಾಗಿರುವುದರಿಂದ ಇವರ ವಿರುದ್ಧ ಕರ್ನಾಟಕ ಸರ್ಕಾರ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 8(iii)ರಲ್ಲಿ ನಮೂದಿಸಿರುವ ದಂಡನೆಯನ್ನು ವಿಧಿಸಿ ಕೂಡಲೇ ಜಾರಿಗೆ ಬರುವಂತೆ ಸದರಿ ಅಧಿಕಾರಿಯವರ ಮುಂದಿನ ಎರಡು ವಾರ್ಷಿಕ ವೇತನ ಬಡ್ತಿಗಳನ್ನು ಸಂಚಿತ ಪರಿಣಾಮರಹಿತವಾಗಿ ತಡೆಹಿಡಿಯಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ. ಕುಲಕರ್ಣಿ**

ಪಿ.ಆರ್. 1006 ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಕಾ. ಮತ್ತು ಸು. ಮತ್ತು ಅಭಿಯೋಗಗಳು).

## ಲೋಕೋಪಯೋಗಿ ಸಚಿವಾಲಯ

**ವಿಷಯ:** ಹಾಸನ ಜಿಲ್ಲೆ ಚನ್ನರಾಯಪಟ್ಟನ ತಾಲ್ಲೂಕಿನಲ್ಲಿ ಬರುವ ಹನ್ನೊಂದು ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೇಗೇರಿಸುವ ಬಗ್ಗೆ.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಇವರ ಪತ್ರಸಂಖ್ಯೆ:ಮುಇಂ:ಸಂಕದರಸ್ತೆ ಶಾಖೆ:ಎಇ-7:ಹಾಸನ: ಮೇಲ್ದರ್ಜೆ:06-07. ದಿನಾಂಕ:8.5.06.

**ಪ್ರಸ್ತಾವನೆ**

ಮೇಲೆ ಓದಲಾದ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು ಇವರು ಹಾಸನ ಜಿಲ್ಲೆ, ಚನ್ನರಾಯಪಟ್ಟಣ ತಾಲ್ಲೂಕಿಗೆ ಸಂಬಂಧಿಸಿದಂತೆ ಈ ಕೆಳಗಿನ ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸುವಂತೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ಸದರಿ ಗ್ರಾಮೀಣ ರಸ್ತೆಗಳು ದುಸ್ಥಿತಿಯಲ್ಲಿದ್ದು. ವಾಹನಗಳು ಮತ್ತು ಸಾರ್ವಜನಿಕರು ಓಡಾಡಲು ತುಂಬಾ ತೊಂದರೆಯಾಗಿರುತ್ತದೆ ಆದುದರಿಂದ ಈ ಗ್ರಾಮೀಣ ರಸ್ತೆಗಳನ್ನು ಸಾರ್ವಜನಿಕರ ಹಿತದೃಷ್ಟಿಯಿಂದ ಜಿಲ್ಲಾ ಮುಖ್ಯ ರಸ್ತೆಯನ್ನಾಗಿ ಮೇಲ್ದರ್ಜೆಗೇರಿಸುವುದು ಅವಶ್ಯಕವಾಗಿರುತ್ತದೆ ಎಂದು ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ), ಬೆಂಗಳೂರು ಇವರು ವರದಿ ಮಾಡಿರುತ್ತಾರೆ.

| ಕ್ರ. ಸಂ. | ರಸ್ತೆಯ ವಿವರ | ಉದ್ದ (ಕಿಮೀ) |
|---|---|---|
| 1. | ಎಸ್.ಸಿ.ಎ. ರಸ್ತೆಯಿಂದ ಬಿ.ಎಂ. ರಸ್ತೆ (ಮಾರ್ಗ ಬರಗೂರು) | 2.50 |
| 2. | ಬಿ.ಎಂ. ರಸ್ತೆಯಿಂದ ಬಿ.ಕೆ.ಟಿ. ರಸ್ತೆ ಮಾರ್ಗ ಕೊಪ್ಪಲು, ಮುರಾರನಹಳ್ಳಿ | 3.00 |
| 3. | ಬಿ.ಎಂ. ರಸ್ತೆ ಜೋಡಿಘಟ್ಟ ವೃತ್ತದಿಂದ ವಗರಹಳ್ಳಿ | 2.00 |
| 4. | ಬಿ.ಎಂ. ರಸ್ತೆಯಿಂದ ಎಸ್.ಸಿ.ಎ. ರಸ್ತೆ (ಮಾರ್ಗ ಊಪಿನಹಳ್ಳಿ) ಸೇರುವ ರಸ್ತೆ | 4.00 |
| 5. | ಚೌಡೇನಹಳ್ಳಿಯಿಂದ ಊಪಿನಹಳ್ಳಿ ಸೇರುವ ರಸ್ತೆ. | 2.00 |
| 6. | ಬಿ.ಎಂ. ರಸ್ತೆಯಿಂದ ಅತ್ತಿಚೌಡನಹಳ್ಳಿ ರಸ್ತೆ ಮಾರ್ಗ ಡಿ. ಸಮುದ್ರವಳ್ಳಿ, ಕತ್ತರಿಘಟ್ಟ, ಕೊಪ್ಪಲು | 3.00 |
| 7. | ಬಿ.ಎಂ. ರಸ್ತೆಯಿಂದ ಜೆ.ಸಿ. ರಸ್ತೆ ಮಾರ್ಗ ಅಲಗೊಂಡನಹಳ್ಳಿ ಜನತಾ ಕಾಲೋನಿ. | 4.00 |
| 8. | ಸಿ.ಎನ್.ಕೆ. ರಸ್ತೆಯಿಂದ ಸಿ.ಎನ್.ಎಸ್. ರಸ್ತೆ ಮಾರ್ಗ ಬಿಂಡೇನಹಳ್ಳಿ | 2.00 |
| 9. | ಎಸ್.ಸಿ.ಎ. ರಸ್ತೆಯಿಂದ ಬಾಗೂರು ರಸ್ತೆ ಮಾರ್ಗ ಚಿಕ್ಕಮತ್ತಿಘಟ್ಟ, ಹರಳಹಳ್ಳಿ, | 4.00 |
| 10. | ಎಸ್.ಸಿ.ಎ. ರಸ್ತೆಯಿಂದ ಹಳೇವಾರನಹಳ್ಳಿ ಗೇಟ್ ಮಾರ್ಗ ವಾರನಹಳ್ಳಿ ಕೆರೆ ಏರಿ. | 2.00 |
| 11. | ಬಿ.ಎಂ. ರಸ್ತೆಯಿಂದ ಬರಗೂರು | 1.80 |

**ಸರ್ಕಾರದ ಆದೇಶ ಸಂಖ್ಯೆ:ಲೋಇ 106 ಸಿಆರ್ಎಂ 2006, ಬೆಂಗಳೂರು, ದಿನಾಂಕ: 27ನೇ ಜೂನ್ 2006**

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು ಇವರ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ, ಈ ಕೆಳಗಿನ ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸಿ ಲೋಕೋಪಯೋಗಿ ಇಲಾಖೆಯ ವ್ಯಾಪ್ತಿಗೆ ತೆಗೆದುಕೊಳ್ಳಲು ಸರ್ಕಾರದ ಅನುಮೋದನೆ ನೀಡಲಾಗಿದೆ.

| ಕ್ರ. ಸಂ. | ರಸ್ತೆಯ ವಿವರ | ಉದ್ದ (ಕಿಮೀ) |
|---|---|---|
| 1. | ಎಸ್. ಸಿ.ಎ. ರಸ್ತೆಯಿಂದ ಬಿ.ಎಂ. ರಸ್ತೆ (ಮಾರ್ಗ ಬರಗೂರು) | 2.50 |
| 2. | ಬಿ.ಎಂ. ರಸ್ತೆಯಿಂದ ಬಿ.ಕೆ.ಟಿ. ರಸ್ತೆ ಮಾರ್ಗ ಕೊಪ್ಪಲು, ಮುರಾರನಹಳ್ಳಿ | 3.00 |
| 3. | ಬಿ.ಎಂ. ರಸ್ತೆ ಜೋಡಿಘಟ್ಟ ವೃತ್ತದಿಂದ ವಗರಹಳ್ಳಿ | 2.00 |
| 4. | ಬಿ.ಎಂ. ರಸ್ತೆಯಿಂದ ಎಸ್.ಸಿ.ಎ. ರಸ್ತೆ (ಮಾರ್ಗ ಊಪಿನಹಳ್ಳಿ) ಸೇರುವ ರಸ್ತೆ | 4.00 |
| 5. | ಚೌಡೇನಹಳ್ಳಿಯಿಂದ ಊಪಿನಹಳ್ಳಿ ಸೇರುವ ರಸ್ತೆ. | 2.00 |
| 6. | ಬಿ.ಎಂ. ರಸ್ತೆಯಿಂದ ಅತ್ತಿಚೌಡನಹಳ್ಳಿ ರಸ್ತೆ ಮಾರ್ಗ ಡಿ. ಸಮುದ್ರವಳ್ಳಿ, ಕತ್ತರಿಘಟ್ಟ, ಕೊಪ್ಪಲು | 3.00 |
| 7. | ಬಿ.ಎಂ. ರಸ್ತೆಯಿಂದ ಜೆ.ಸಿ. ರಸ್ತೆ ಮಾರ್ಗ ಅಲಗೊಂಡನಹಳ್ಳಿ ಜನತಾ ಕಾಲೋನಿ. | 4.00 |
| 8. | ಸಿ.ಎನ್.ಕೆ. ರಸ್ತೆಯಿಂದ ಸಿ.ಎನ್.ಎಸ್. ರಸ್ತೆ ಮಾರ್ಗ ಬಿಂಡೇನಹಳ್ಳಿ | 2.00 |
| 9. | ಎಸ್.ಸಿ.ಎ. ರಸ್ತೆಯಿಂದ ಬಾಗೂರು ರಸ್ತೆ ಮಾರ್ಗ ಚಿಕ್ಕಮತ್ತಿಘಟ್ಟ, ಹರಳಹಳ್ಳಿ, | 4.00 |
| 10. | ಎಸ್.ಸಿ.ಎ. ರಸ್ತೆಯಿಂದ ಹಳೇವಾರನಹಳ್ಳಿ ಗೇಟ್ ಮಾರ್ಗ ವಾರನಹಳ್ಳಿ ಕೆರೆ ಏರಿ. | 2.00 |
| 11. | ಬಿ.ಎಂ. ರಸ್ತೆಯಿಂದ ಬರಗೂರು | 1.80 |

ಈ ಆದೇಶವನ್ನು ಮಾನ್ಯ ಮುಖ್ಯಮಂತ್ರಿಯವರ ಟಿಪ್ಪಣಿ ಸಂಖ್ಯೆ: ASCM 924/2006 ದಿನಾಂಕ:19.5.06 ರನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಜಿ. ನಾರಾಯಣ**

ಸರ್ಕಾರದ ಅಧೀನ ಕಾರ್ಯದರ್ಶಿ,

ಲೋಕೋಪಯೋಗಿ ಇಲಾಖೆ (ಸಂಪರ್ಕ)

ಪಿ.ಆರ್. 1008

**ವಿಷಯ:** ಶ್ರೀ ರಾಮಕೃಷ್ಣ ಆಶ್ರಮ, ಬೇಲೂರು ಮಠ, ಪಶ್ಚಿಮ ಬಂಗಾಳ ಇವರಿಗೆ ಬೆಳಗಾವಿಯ ಕೋಟೆ ಪ್ರದೇಶದಲ್ಲಿ ಆಶ್ರಮ ಸುತ್ತಲೂ ಇರುವ ಸರ್ವೆ ನಂ.345 ರಲ್ಲಿನ 2.62 ಎಕರೆ ಜಮೀನನ್ನು ನೀಡುವ ಬಗ್ಗೆ.

**ಓದಲಾಗಿದೆ:**

1. ಸರ್ಕಾರದ ಆದೇಶ ಸಂಖ್ಯೆ:ಲೋಇ 104 ಬಿಎಂಎಸ್ 2001 ದಿನಾಂಕ:24.10.2001.
2. ಸರ್ಕಾರದ ಆದೇಶ ಸಂಖ್ಯೆ:ಲೋಇ 104 ಬಿಎಂಎಸ್ 2001 ದಿನಾಂಕ:30.1.2002.
3. ಸರ್ಕಾರದ ಆದೇಶ ಸಂಖ್ಯೆ:ಲೋಇ 104 ಬಿಎಂಎಸ್ 2001 ದಿನಾಂಕ:28.10.2003.
4. ಕಾರ್ಯದರ್ಶಿಗಳು, ಶ್ರೀ ರಾಮಕೃಷ್ಣ ಆಶ್ರಮ, ಬೆಳಗಾಂ ಇವರ ಮನವಿ ಪತ್ರ ದಿನಾಂಕ 8.2.2004.
5. ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ಉತ್ತರ), ಧಾರವಾಡ ಇವರ ಪತ್ರ ಸಂಖ್ಯೆ:ಸಿಇಎನ್/ಸಿ-16/ಕಸಮ-39/01-02/3229 ದಿನಾಂಕ: 26.7.2004.

**ಪ್ರಸ್ತಾವನೆ:**

ಬೆಳಗಾವಿ ನಗರದ ಕೊಳಚಿ ಪ್ರದೇಶದ ಸರ್ವೆ ನಂ.345ರಲ್ಲಿ 3642 ಚದರ ಮೀಟರ್ (36 ಗುಂಟೆ) ಜಾಗವನ್ನು ಶ್ರೀ ರಾಮಕೃಷ್ಣ ಮಿಷನ್ ಆಶ್ರಮ, ಬೇಲೂರು ಮಠ, ಪಶ್ಚಿಮ ಬಂಗಾಳ, ಇವರಿಗೆ ವಾರ್ಷಿಕ ರೂ.1,00,000/- ಗಳ ನೆಲ ಬಾಡಿಗೆಯನ್ನು ನಿಗದಿಪಡಿಸಿ 30 ವರ್ಷಗಳ ಅವಧಿಗೆ ಕೆಲವು ಷರತ್ತುಗಳೊಂದಿಗೆ ಮೇಲೆ ಓದಲಾದ ಕ್ರಮ ಸಂಖ್ಯೆ: (1)ರ ಸರ್ಕಾರಿ ಆದೇಶದನ್ವಯ ಗುತ್ತಿಗೆಗೆ ನೀಡಿ ಆದೇಶ ಹೊರಡಿಸಲಾಗಿದೆ.

ಶ್ರೀ ರಾಮಕೃಷ್ಣ ಮಿಷನ್ ಆಶ್ರಮ ಇವರಿಗೆ ಗುತ್ತಿಗೆಗೆ ನೀಡಲಾದ ಸದರಿ 36 ಗುಂಟೆ ಜಮೀನಿಗೆ ನಿಗದಿಪಡಿಸಲಾದ ರೂ.1,00,000/-ಗಳ ನೆಲ ಬಾಡಿಗೆಯನ್ನು ರೂ.25,000/- ಗಳಿಗೆ ಕಡಿಮೆಗೊಳಿಸಿ ಮೇಲೆ ಓದಲಾದ ಕ್ರಮ ಸಂಖ್ಯೆ: (2)ರಲ್ಲಿ ಮಾರ್ಪಡಿಸಿ ಆದೇಶ ಹೊರಡಿಸಲಾಗಿದೆ.

ಶ್ರೀ ರಾಮಕೃಷ್ಣ ಮಿಷನ್ ಆಶ್ರಮ ಇರರಿಗೆ ಈಗಾಗಲೇ ನೀಡಿರುವ 36 ಗುಂಟೆ ಜಾಗಕ್ಕೆ ಹೊಂದಿಕೊಂಡಂತೆ ಇರುವ 1.63 ಎಕರೆ ಜಮೀನು ಮತ್ತು ಅದರಲ್ಲಿರುವ ಕಾಡಾ ಬಂಗಲೆಯನ್ನು ಒಳಗೊಂಡಂತೆ ವಾರ್ಷಿಕ ರೂ.60,000/-ಗಳ ನೆಲ ಬಾಡಿಗೆಯನ್ನು ವಿಧಿಸಿ 30 ವರ್ಷಗಳ ಅವಧಿಗೆ ಗುತ್ತಿಗೆಗೆ ನೀಡಿ. ಮೇಲೆ ಓದಲಾದ ಕ್ರಮ ಸಂಖ್ಯೆ: 3 ರನ್ವಯ ಕ್ರಮಸಂಖ್ಯೆ (1)ರ ಸರ್ಕಾರಿ ಆದೇಶದಲ್ಲಿ ವಿಧಿಸಿರುವ ಷರತ್ತುಗಳೊಂದಿಗೆ ಆದೇಶ ಹೊರಡಿಸಲಾಗಿದೆ.

ಬೆಳಗಾವಿ ನಗರದ ಕೋಟೆ ಪ್ರದೇಶದ ಸರ್ವೆ ನಂ.345ರಲ್ಲಿನ 2.62 ಎಕರೆ ಜಾಗವನ್ನು ಉಚಿತವಾಗಿ ಆಶ್ರಮಕ್ಕೆ ನೀಡಬೇಕೆಂದು ಮೇಲೆ ಓದಲಾದ ಕ್ರಮ ಸಂಖ್ಯೆ: 4ರಲ್ಲಿ ಕಾರ್ಯದರ್ಶಿಗಳು, ಶ್ರೀ ರಾಮಕೃಷ್ಣ ಮಿಷನ್ ಆಶ್ರಮ, ಬೆಳಗಾವಿ, ಇವರು ಸರ್ಕಾರಕ್ಕೆ ಮನವಿ ಸಲ್ಲಿಸಿರುತ್ತಾರೆ.

ಶ್ರೀ ರಾಮಕೃಷ್ಣ ಮಿಷನ್ ಆಶ್ರಮದವರು ಕೋರಿರುವ ಸರ್ವೆ ನಂ.345ರಲ್ಲಿನ 262 ಎಕರೆ ಜಾಗದಲ್ಲಿ ಸರ್ಕಾರದ 29 ವಸತಿ ಗೃಹಗಳಿದ್ದು, ಈ ವಸತಿ ಗೃಹಗಳು ಸದೃಡವಾಗಿದ್ದು, ನಗರ ಹೃದಯ ಭಾಗದಲ್ಲಿ ಎಲ್ಲಾ ಸೌಕರ್ಯಗಳು ಹಾಗೂ ಮೂಲಭೂತ ಸೌಲಭ್ಯಗಳನ್ನು ಹೊಂದಿದ್ದು ಶಾಲೆ ಮತ್ತು ಕಛೇರಿಗಳಿಗೆ ಹತ್ತಿರವಾಗಿರುತ್ತದೆ ಎಂದು ತಿಳಿಸಿ ಹಾಗೂ ಈಗಿರುವ ವಸತಿ ಗೃಹಗಳ ಜಾಗವನ್ನು ಆಶ್ರಮಕ್ಕೆ ಕೊಟ್ಟಲ್ಲಿ ಸರ್ಕಾರಿ ನೌಕರರಿಗೆ ತೊಂದರೆಯಾಗುತ್ತದೆ. ಹೊಸದಾಗಿ ವಸತಿ ಗೃಹ ನಿರ್ಮಿಸಬೇಕಾದರೆ ರೂ.30.00 ಲಕ್ಷಗಳ ಅನುದಾನ ಬೇಕಾಗಿದ್ದು, ಅದಕ್ಕೆ ವಿವರವಾದ ವರದಿ ಮತ್ತು ನಕ್ಷೆಯನ್ನು ಸಲ್ಲಿಸಿ, ಸದರಿ 29 ವಸತಿ ಗೃಹಗಳ ನಿರ್ಮಾಣ ಕಾಮಗಾರಿಯನ್ನು ಆಯವ್ಯಯದಲ್ಲಿ ಸೇರ್ಪಡೆ ಮಾಡಿದಲ್ಲಿ ಶ್ರೀ ರಾಮಕೃಷ್ಣ ಮಿಷನ್ ಆಶ್ರಮದವರು ಕೋರಲಾದ ಒಟ್ಟಾರೆ 29 ವಸತಿ ಗೃಹಗಳನ್ನು ಹಸ್ತಾಂತರಿಸಬಹುದಾಗಿದೆಯೆಂದು ಮೇಲೆ ಓದಲಾದ ಕ್ರಮ ಸಂಖ್ಯೆ: 5ರಲ್ಲಿ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ಉತ್ತರ), ಧಾರವಾಡ, ಇವರು ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಮೇಲಿನ ಪ್ರಸ್ತಾವನೆಯಲ್ಲಿನ ಎಲ್ಲಾ ಅಂಶಗಳನ್ನು ಸರ್ಕಾರವು ಕೂಲಂಕಷಾಗಿ ಪರಿಶೀಲಿಸಿ ಈ ಮುಂದಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಲೋಇ 50 ಬಿಎಂಎಸ್ 2005, ಬೆಂಗಳೂರು, ದಿನಾಂಕ: 28ನೇ ಜೂನ್ 2006**

ಶ್ರೀ ರಾಮಕೃಷ್ಣ ಮಿಷನ್ ಆಶ್ರಮ, ಬೇಲೂರು ಮಠ, ಪಶ್ಚಿಮ ಬಂಗಾಳ ಇವರಿಗೆ ಬೆಳಗಾವಿ ಕೋಟೆ ಪ್ರದೇಶದ ಸರ್ವೆ ನಂ.345ರಲ್ಲಿನ 3642 ಚದರ ಮೀಟರ್ (36 ಗುಂಟೆ) ಜಾಗವನ್ನು ಹಾಗೂ ಇದಕ್ಕೆ ಹೊಂದಿಕೊಂಡಿರುವ 1.63 ಎಕರೆ ಜಾಗವನ್ನು ಸಹಾ ಅದರಲ್ಲಿರುವ ಕಾಡಾ ಬಂಗಲೆ ಸಮೇತ ಈಗಾಗಲೇ ಗುತ್ತಿಗೆ ಆಧಾರದ ಮೇಲೆ ನೀಡಲಾಗಿದ್ದು ಹೆಚ್ಚುವರಿಯಾಗಿ ಇದಕ್ಕೆ ಹೊಂದಿಕೊಂಡಂತೆ ಇದೇ ಸರ್ವೆ ನಂ.345ರಲ್ಲಿ ಪುನಃ 2.62 ಎಕರೆ ಜಮೀನನ್ನು ಸೇರಿಸಿಕೊಂಡು ಒಟ್ಟಾರೆ ಈ ಆಶ್ರಮಕ್ಕೆ 05.15 ಎಕರೆ ಜಮೀನನ್ನು ಈ ಕೆಳಕಂಡ ಷರತ್ತುಗಳಿಗೊಳಪಟ್ಟು 30 ವರ್ಷಗಳ ಅವಧಿಗೆ ಪ್ರತಿ ಎಕರೆಗೆ ಪ್ರತಿ ವರ್ಷಕ್ಕೆ ರೂ.1000.00 (ಒಂದು ಸಾವಿರ ರೂಪಾಯಿಗಳು ಮಾತ್ರ)ಗಳ ನೆಲಬಾಡಿಗೆ ವಿಧಿಸಿ ಈ ತಕ್ಷಣದಿಂದ ಜಾರಿಗೆ ಬರುವಂತೆ ಗುತ್ತಿಗೆಗೆ ನೀಡಿ ಆದೇಶಿಸಿದೆ.

**ಷರತ್ತುಗಳು:**

1) ಶ್ರೀ ರಾಮಕೃಷ್ಣ ಮಿಷನ್ ಆಶ್ರಮ, ಬೇಲೂರು ಮಠ, ಪಶ್ಚಿಮ ಬಂಗಾಳ ಇವರು ಈ ಜಮೀನನ್ನು ಧಾರ್ಮಿಕ ಮತ್ತು ಸಾಮಾಜಿಕ ಸೇವೆಗಳಿಗಾಗಿ ಮಾತ್ರ ಉಪಯೋಗಿಸಿಕೊಳ್ಳತಕ್ಕದ್ದು.
2) ಈ ಜಮೀನು ಮತ್ತು ಕಟ್ಟಡಗಳನ್ನು ಮೇಲಿನ ಉದ್ದೇಶಕ್ಕಲ್ಲದೇ ಬೇರೆ ಯಾವುದೇ ಉದ್ದೇಶಕ್ಕೆ ಉಪಯೋಗಿಸಿಕೊಳ್ಳತಕ್ಕದ್ದಲ್ಲ.
3) ಅರ್ಜಿದಾರರು, ಜಮೀನು ಮತ್ತು ಕಟ್ಟಡಗಳನ್ನು ಯಾವುದೇ ವಾಣಿಜ್ಯ ಉದ್ದೇಶಗಳಿಗೆ ಅವಾ ಯಾವುದೇ ವ್ಯಕ್ತಿಗೆ ಅಥವಾ ಯಾವುದೇ ಸಂಘ ಅಥವಾ ಸಂಸ್ಥೆ ಇತ್ಯಾದಿಗಳಿಗೆ ಒಳಗುತ್ತಿಗೆ ಅಥವಾ ಒಳಬಾಡಿಗೆಗೆ ನೀಡತಕ್ಕದ್ದಲ್ಲ.
4) ಅರ್ಜಿದಾರರು, ಕಂಟೋನ್‌ಮೆಂಟ್ ಮಂಡಳಿಯಲ್ಲಿ ಜಾರಿಯಲ್ಲಿರುವ ಕಾನೂನು ಮತ್ತು ಬೈಲಾಗಳನ್ನು ಪಾಲಿಸತಕ್ಕದ್ದು.
5) ಅರ್ಜಿದಾರರ ಹೊರ ಚಟುವಟಿಕೆಗಳನ್ವಯ ಉದ್ಭವಿಸಬಹುದಾದಂತಹ ಯಾವುದೇ ವ್ಯಾಜ್ಯಗಳಿಗೆ ಸರ್ಕಾರವು ಜವಾಬ್ದಾರರಾಗುವುದಿಲ್ಲ. ಅರ್ಜಿದಾರರು, ಯಾವುದೇ ಪ್ರತ್ಯೇಕ ಸಂಘ ಅಥವಾ ಸಂಸ್ಥೆಗಳಲ್ಲಿ ಪ್ರವೇಶಿಸಿದಲ್ಲಿ ಅದರಿಂದ ಉಂಟಾಗುವ ಯಾವುದೇ ಪರಿಣಾಮಗಳಿಗೆ ಅರ್ಜಿದಾರರೇ ಹೊಣೆಗಾರರಾಗುತ್ತಾರೆ. ಹಾಗೂ ಅಂತಹ ಮೌಲ್ಯಗಳಿಗೆ ಮತ್ತು ಅಂತಹ ವ್ಯಾಜ್ಯಗಳ ಪರಿಣಾಮಗಳನ್ನು ಅರ್ಜಿದಾರರೇ ಎಲ್ಲಾ ಜವಾಬ್ದಾರಿ ಮೇಲೆ ನಿರ್ವಹಿಸತಕ್ಕದ್ದು.

6) ಅರ್ಜಿದಾರರು ಯಾವುದೇ ರಾಜಕೀಯ ಚಟುವಟಿಕೆಗಳನ್ನು ಈ ಜಮೀನು ಮತ್ತು ಕಟ್ಟಡಗಳಿಗೆ ತರತಕ್ಕದ್ದಲ್ಲ ಮತ್ತು ಈ ಜಮೀನಿನ ಯಾವುದೇ ಭಾಗ ಅಥವಾ ಕಟ್ಟಡದಲ್ಲಾಗಲಿ ಯಾವುದೇ ಅಪರಾಧ, ಗಲಭೆ ಅಥವಾ ಅಪಾಯಕಾರಿ ಉದ್ದಿಮೆ, ವ್ಯಾಪಾರ ಅಥವಾ ವೃತ್ತಿ ಇವುಗಳಿಂದ ಆವರಣದಲ್ಲಿರುವ ವ್ಯಕ್ತಿಗಳಿಗೆ ಅಥವಾ ಅದರ ಪರಿಸರಕ್ಕೆ ತೊಂದರೆ ಉಂಟಾಗುವ ರೀತ್ಯಾ ನಡೆದುಕೊಳ್ಳತಕ್ಕದ್ದಲ್ಲ.
7) ಅರ್ಜಿದಾರರೇ ಸ್ಥಳೀಯ ಪ್ರಾಧಿಕಾರಿಗಳಿಗೆ ಗುತ್ತಿಗೆ ನೀಡಲಾದ ಜಮೀನು ಮತ್ತು ಕಟ್ಟಡ ಹಾಗೂ ಮುಂದೆ ನಿರ್ಮಿಸಲಾಗುವ ಕಟ್ಟಡಗಳಿಗೆ ಎಲ್ಲಾ ತೆರಿಗೆ ಮತ್ತು ಕರಗಳನ್ನು ಪಾವತಿಸತಕ್ಕದ್ದು.
8) ಕಾರ್ಯಪಾಲಕ ಇಂಜಿನಿಯರ್, ಲೋಕೋಪಯೋಗಿ ಇಲಾಖೆ, ಬೆಳಗಾವಿ ವಿಭಾಗ, ಬೆಳಗಾವಿ ಇವರಿಗೆ ತೃಪ್ತಿಕರವಾಗುವ ರೀತಿಯಲ್ಲಿ ಜಮೀನು, ಕಟ್ಟಡ ಮತ್ತು ಆವರಣವನ್ನು ಚೊಕ್ಕಟವಾಗಿಡುವುದು ಅರ್ಜಿದಾರರ ಜವಾಬ್ದಾರಿಯಾಗಿರುತ್ತದೆ.

ಈ ಆದೇಶವನ್ನು ಕಂದಾಯ ಇಲಾಖೆಯ ಟಿಪ್ಪಣಿ ಸಂಖ್ಯೆ: ಆರ್‌ಡಿ 13 ಎಲ್‌ಜಿಎಲ್ 2006, ದಿನಾಂಕ: 3.4.2006ರನ್ವಯ ಹಾಗೂ ಕರ್ನಾಟಕ ಸರ್ಕಾರ (ವ್ಯವಹಾರ ನಿರ್ವಹಣೆ) ನಿಯಮಗಳು 1977ರ ನಿಯಮ 17, ಉಪನಿಯಮ 2ರನ್ವಯ ಮತ್ತು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಲೋಇ 301 ಆಕೋ-III/2006 ದಿನಾಂಕ:24.6.2006ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ.ಕೆ. ನರಸಿಂಹಲು**
ಸರ್ಕಾರದ ಅಧೀನ ಕಾರ್ಯದರ್ಶಿ,
ಲೋಕೋಪಯೋಗಿ ಇಲಾಖೆ (ಕಟ್ಟಡಗಳು).

ಪಿ.ಆರ್. 1009

## ಒಳಾಡಳಿತ ಸಚಿವಾಲಯ

### ತಿದ್ದುಪಡಿ

### ಸಂಖ್ಯೆ:ಒಇ 29 ಪಿಪಿಇ 2006 ಬೆಂಗಳೂರು, ದಿನಾಂಕ: 24ನೇ ಜೂನ್ 2006

ಸರ್ಕಾರಿ ಆದೇಶ ಸಂಖ್ಯೆ:ಒಇ 168 ಪಿಪಿಇ 2005 ದಿನಾಂಕ 18.10.2005ರ ಆದೇಶದ ಆದೇಶ ಭಾಗದಲ್ಲಿ ಕ್ರಮ ಸಂಖ್ಯೆ-2 ರಲ್ಲಿ ನಮೂದಿಸಿರುವ "ಲೆಕ್ಕ ಪತ್ರ ಅಧೀಕ್ಷಕರ ಹುದ್ದೆ-1 (ವೇತನ ಶ್ರೇಣಿ ರೂ. 5200-9580)" ಎಂಬುದರ ಬದಲಾಗಿ "ಲೆಕ್ಕ ಪತ್ರ ಅಧೀಕ್ಷಕರ ಹುದ್ದೆ-1 (ವೇತನ ಶ್ರೇಣಿ ರೂ. 5575-10620)" ಎಂದು ತಿದ್ದಿಕೊಂಡು ಓದಿಕೊಳ್ಳತಕ್ಕದ್ದು.

ಇದರ ಹೊರತಾಗಿ ಸದರಿ ಆದೇಶದಲ್ಲಿ ಬೇರೆ ಯಾವ ಬದಲಾವಣೆ ಇರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್.ಎ. ಕುಲಕರ್ಣಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಕಾ. ಮತ್ತು ಸು. ಮತ್ತು ಕಾಫಿಪೋಸ ಮತ್ತು ಅಭಿಯೋಗ)

ಪಿ.ಆರ್. 1010

### ತಿದ್ದುಪಡಿ ಸಂಖ್ಯೆ:ಒಇ 63 ಪಿಪಿಇ 2005 ಬೆಂಗಳೂರು, ದಿನಾಂಕ: 20ನೇ ಜೂನ್ 2006

ಸಮಸಂಖ್ಯೆಯ ಸರ್ಕಾರಿ ಆದೇಶ ದಿನಾಂಕ:25.4.2006ರ ಆದೇಶದಲ್ಲಿ ಪ್ರತಿಗಳನ್ನು ಗುರುತಿಸಿರುವ ಕ್ರಮ ಸಂಖ್ಯೆ 4ರಲ್ಲಿ ನಮೂದಿಸಿರುವ "ಸರ್ಕಾರಿ ಅಭಿಯೋಜಕರು, ಗದಗ್" ಎಂಬುದರ ಬದಲಾಗಿ "ಟಿ.ಎನ್. ಗೋಪಿನಾಥ್, ಸಹಾಯಕ ಅಭಿಯೋಗ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರ ಕಛೇರಿ, ಬೆಂಗಳೂರು" ಎಂದು ತಿದ್ದಿಕೊಂಡು ಓದಿಕೊಳ್ಳತಕ್ಕದ್ದು.

ಇದರ ಹೊರತಾಗಿ ಸದರಿ ಆದೇಶದಲ್ಲಿ ಬೇರೆ ಯಾವ ಬದಲಾವಣೆ ಇರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್.ಎ. ಕುಲಕರ್ಣಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಕಾ. ಮತ್ತು ಸು. ಮತ್ತು ಕಾಫಿಪೋಸ ಮತ್ತು ಅಭಿಯೋಗ)

ಪಿ.ಆರ್. 1011

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ:** ಉಪನಿರ್ದೇಶಕರು, ಖಾದಿ ಮತ್ತು ಗ್ರಾಮೋದ್ಯೋಗ ಇಲಾಖೆ ಇವರು ಯೋಜನಾ ನಿರ್ದೇಶಕರು, (ಡಿಆರ್‌ಡಿಎ) ಇವರ ಅಧೀನದಲ್ಲಿ ಕೆಲಸ ನಿರ್ವಹಿಸುವ ಬಗ್ಗೆ.

**ಓದಲಾಗಿದೆ:** ಸರ್ಕಾರದ ಸುತ್ತೋಲೆ ಸಂಖ್ಯೆ: ಗ್ರಾಅಪ 2 ಎಸ್‌ಇಪಿ (ಇತರೆ) 2006 ದಿನಾಂಕ:2.2.2006.

**ಪ್ರಸ್ತಾವನೆ**

ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆ (ಎಸ್‌ಜಿಎಸ್‌ವೈ)ಯನ್ನು ದಿನಾಂಕ:1.4.1999ರಿಂದ ಕೇಂದ್ರ ಸರ್ಕಾರ ಜಾರಿಗೊಳಿಸಿದೆ. ಇದು ಸ್ವಯಂ ಉದ್ಯೋಗ ಯೋಜನೆಯಾಗಿದ್ದು, ಬಡಜನರನ್ನು ಸ್ವಸಹಾಯ ಗುಂಪುಗಳಾಗಿ ರಚನೆ ಮಾಡುವುದು, ತರಬೇತಿ, ಸಾಲ, ತಂತ್ರಜ್ಞಾನ, ಮೂಲಸ್ವತ್ತು ಅಭಿವೃದ್ಧಿ ಮತ್ತು ಮಾರುಕಟ್ಟೆ ಒದಗಿಸುವ ಸಮಗ್ರ ಯೋಜನೆಯಾಗಿದೆ. ನೆರವು ನೀಡಿದ ಕುಟುಂಬಗಳನ್ನು ಬಡತನ ರೇಖೆಯಿಂದ ಮೇಲೆತ್ತುವುದೇ ಇದರ ಪ್ರಮುಖ ಉದ್ದೇಶ. ಕೃಷಿ, ತೋಟಗಾರಿಕೆ, ರೇಷ್ಮೆ, ಪಶುಸಂಗೋಪನೆ, ಮೀನುಗಾರಿಕೆ, ಕೈಮಗ್ಗ ಮತ್ತು ಜವಳಿ ಇಲಾಖೆ, ಖಾದಿ ಮತ್ತು ಗ್ರಾಮೋದ್ಯೋಗ ಇಲಾಖೆಗಳ ಸಹಯೋಗದೊಂದಿಗೆ ಯೋಜನೆಯನ್ನು ಅನುಷ್ಠಾನಗೊಳಿಸಲಾಗುತ್ತಿದೆ. ಈ ಯೋಜನೆಯ ಅನುಷ್ಠಾನಕ್ಕಾಗಿ ಆಡಳಿತ ವ್ಯವಸ್ಥೆಯನ್ನು ಬಲಪಡಿಸಬೇಕಾಗಿದೆ. ಈ ಉದ್ದೇಶಕ್ಕಾಗಿ ಜಿಲ್ಲಾ ಪಂಚಾಯತ್ ಅಧೀನದಲ್ಲಿ ಕೆಲಸ ನಿರ್ವಹಿಸುತ್ತಿರುವ ಖಾದಿ ಮತ್ತು ಗ್ರಾಮೋದ್ಯೋಗ ಇಲಾಖೆಯ ಉಪ ನಿರ್ದೇಶಕರಿಗೆ ಯೋಜನಾ ನಿರ್ದೇಶಕರು (ಡಿಆರ್‌ಡಿಎ) ಇವರ ಅಧೀನದಲ್ಲಿ ಕೆಲಸ ನಿರ್ವಹಿಸುವಂತೆ ಆದೇಶಿಸಬಹುದಾಗಿದೆ ಹಾಗೂ ಉಪನಿರ್ದೇಶಕರು ಖಾದಿ ಮತ್ತು ಗ್ರಾಮೋದ್ಯೋಗ ಇವರ ಅಧೀನದಲ್ಲಿ ಕೆಲಸ ನಿರ್ವಹಿಸುತ್ತಿರುವ ಕೈಗಾರಿಕಾ ವಿಸ್ತಾರಣಾಧಿಕಾರಿಗಳಿಗೆ ತಾಲ್ಲೂಕು ಮಟ್ಟದಲ್ಲಿ ಎಸ್‌ಜಿಎಸ್‌ವೈ ಯೋಜನೆಯ ಅನುಷ್ಠಾನದ ಜವಾಬ್ದಾರಿಯನ್ನು ವಹಿಸಬೇಕಾಗಿದೆ. ಆದುದರಿಂದ ಆದೇಶ.

**ಸರ್ಕಾರದ ಆದೇಶ ಸಂಖ್ಯೆ:ಗ್ರಾಅಪ 2 ಎಸ್‌ಇಪಿ (ಇತರೆ) 2006, ಬೆಂಗಳೂರು, ದಿನಾಂಕ:23ನೇ ಜೂನ್ 2006**

1. ಮೇಲೆ ವಿವರಿಸಿರುವ ಪ್ರಸ್ತಾವನೆಯ ಹಿನ್ನಲೆಯಲ್ಲಿ, ಉಪನಿರ್ದೇಶಕರು, ಖಾದಿ ಮತ್ತು ಗ್ರಾಮೋದ್ಯೋಗ ಇವರು ಜಿಲ್ಲಾ ಪಂಚಾಯತ್‌ನ ಯೋಜನಾ ನಿರ್ದೇಶಕರು, (ಡಿಆರ್‌ಡಿಎ) ಇವರ ಅಧೀನದಲ್ಲಿ ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆ (ಎಸ್‌ಜಿಎಸ್‌ವೈ) ಯನ್ನು ಅನುಷ್ಠಾನಗೊಳಿಸಲು ಆದೇಶಿಸಲಾಗಿದೆ. ಉಪನಿರ್ದೇಶಕರ ಕಛೇರಿ ಮತ್ತು ಸಿಬ್ಬಂದಿಯು ಯೋಜನಾ ನಿರ್ದೇಶಕರ ಉಸ್ತುವಾರಿಯಲ್ಲಿ ಕೆಲಸ ನಿರ್ವಹಿಸುತ್ತದೆ.

2. ಯೋಜನಾ ನಿರ್ದೇಶಕರು, ಡಿಆರ್‌ಡಿಎ ಕೋಶದೊಂದಿಗೆ ಉಪ ನಿರ್ದೇಶಕರು ಖಾದಿ ಮತ್ತು ಗ್ರಾಮೋದ್ಯೋಗ ಇವರ ಕಛೇರಿಯನ್ನು ಒಂದು ತಿಂಗಳೊಳಗಾಗಿ ವಿಲೀನಗೊಳಿಸುವುದು ಮತ್ತು ಮೂರು ತಿಂಗಳೊಳಗೆ ಜಿಲ್ಲಾ ಪಂಚಾಯತಿಯ ಕಛೇರಿಗೆ ಸ್ಥಳಾಂತರಿಸುವುದು.

3. ಯೋಜನಾ ನಿರ್ದೇಶಕರು (ಡಿಆರ್‌ಡಿಎ) ಉಪ ನಿರ್ದೇಶಕರು ಖಾದಿ ಮತ್ತು ಗ್ರಾಮೋದ್ಯೋಗ ಹಾಗೂ ತಾಲ್ಲೂಕು ಕಾರ್ಯ ನಿರ್ವಹಣಾಧಿಕಾರಿಗಳ ಅಧೀನದಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಕೈಗಾರಿಕಾ ವಿಸ್ತರಣಾಧಿಕಾರಿಗಳನ್ನು ತಾಲ್ಲೂಕಿನ ಎಸ್‌ಜಿಎಸ್‌ವೈ ಅನುಷ್ಠಾನಾಧಿಕಾರಿಯಾಗಿ ನೇಮಕ ಮಾಡಲಾಗಿದೆ. ಕೈಗಾರಿಕಾ ವಿಸ್ತರಣಾಧಿಕಾರಿಗಳ ಕಛೇರಿಯನ್ನು ಮೂರು ತಿಂಗಳೊಳಗಾಗಿ ಕಾರ್ಯನಿರ್ವಹಣಾಧಿಕಾರಿ, ತಾಲ್ಲೂಕು ಪಂಚಾಯತಿ ಕಛೇರಿಗೆ ಸ್ಥಳಾಂತರಿಸಲು ಆದೇಶಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್. ಶಿವಶೈಲಂ**

ಪಿ.ಆರ್. 1012

ಸರ್ಕಾರದ ಕಾರ್ಯದರ್ಶಿ,

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ವಿ.ಬಿ. ನಾಯಕ್ 1ನೇ ಅಪರ ಸರ್ಕಾರಿ ಅಭಿಯೋಜಕರು, ಮೈಸೂರು, ಇವರ ವಿರುದ್ಧದ ಆರೋಪಗಳ ಬಗ್ಗೆ ವಿಚಾರಣೆ ನಡೆಸಲು ವಿಚಾರಣಾಧಿಕಾರಿ ಮತ್ತು ಮಂಡನಾಧಿಕಾರಿಗಳನ್ನು ನೇಮಿಸುವ ಬಗ್ಗೆ .

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಲಾ 120 ಪಿಪಿಇ 98, ಬೆಂಗಳೂರು ದಿನಾಂಕ:20.3.2003
2. ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರ ಪತ್ರ ಸಂಖ್ಯೆ ಡಿಪಿಎನ್/ಆದಾ/04/98-99 ದಿನಾಂಕ:16.7.03
3. ಸರ್ಕಾರಿ ಆದೇಶ ಸಂಖ್ಯೆ ಲಾ 120 ಪಿಪಿಇ 98 ದಿನಾಂಕ:24.9.2003
4. ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರ ಪತ್ರ ಸಂಖ್ಯೆ ಡಿಪಿಎನ್/ಆದಾ/04/98-99 ದಿನಾಂಕ:26.4.06

**ಪ್ರಸ್ತಾವನೆ:**

ಶ್ರೀ ವಿ.ಬಿ. ನಾಯಕ್ 1ನೇ ಅಪರ ಸರ್ಕಾರಿ ಅಭಿಯೋಜಕರು ಇವರ ವಿರುದ್ಧ ಆಸ್ತಿ ಮತ್ತು ಹೊಣೆಗಾರಿಕೆ ಪಟ್ಟಿಗಳನ್ನು ಸಲ್ಲಿಸದಿರುವ ಬಗ್ಗೆ, ಗೃಹ ನಿರ್ಮಾಣ ಮಾಡಲು ಮತ್ತು ಹೆಚ್.ಡಿ.ಎಫ್.ಸಿ ಯಿಂದ ಗೃಹ ನಿರ್ಮಾಣ ಮಾಡಲು ಸಾಲ ಪಡೆಯುವ ಸಂಬಂಧವಾಗಿ ಅನುಮತಿ ಕೋರಿ ಸಲ್ಲಿಸಿರುವ ಮನವಿಯನ್ನು ಪರಿಶೀಲಿಸಲು ಕೋರಿರುವ ದಾಖಲೆಗಳನ್ನು/ಮಾಹಿತಿಗಳನ್ನು ಒದಗಿಸದೇ ಇರುವ ಆರೋಪಗಳ ಬಗ್ಗೆ ಇಲಾಖಾ ವಿಚಾರಣೆಯನ್ನು ಮಾಡಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರನ ಮತ್ತು ಮೇಲ್ಮನವಿ) ನಿಯಮಾವಳಿ 1957 ರ ನಿಯಮ 11 ಮತ್ತು 11(ಎ) ರನ್ವಯ ಇಲಾಖಾ ವಿಚಾರಣೆಯನ್ನು ಮಾಡಲು ಶ್ರೀ ವಿ. ಹೆಚ್. ಉಪಾಧ್ಯಾಯ, ನಿವೃತ್ತ ನ್ಯಾಯಾಧೀಶರು, ಬೆಂಗಳೂರು-86 ಇವರನ್ನು ಕರ್ನಾಟಕ ಸರ್ಕಾರಿ ಸೇವಾ ನಿಯಾಮಾವಳಿ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) 1957ರ ನಿಯಮ 11(2)ರ ಅಡಿಯಲ್ಲಿ ವಿಚಾರಣಾಧಿಕಾರಿಯಾಗಿ ಮತ್ತು ಸದರಿ ಪ್ರಕರಣದಲ್ಲಿ ಸರ್ಕಾರದ ಪರವಾಗಿ ದಾಖಲೆಗಳನ್ನು ಮಂಡಿಸಲು ಕರ್ನಾಟಕ ಸರ್ಕಾರ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11 (5) (ಸಿ) ರನ್ವಯ ಶ್ರೀ ಎ.ವಿ. ದೇಶಪಾಂಡೆ, ಜಂಟಿ ಅಭಿಯೋಗ ನಿರ್ದೇಶಕರು (ಆಡಳಿತ), ಅಭಿಯೋಗ ನಿರ್ದೇಶಕರ ಕಛೇರಿ, ಬೆಂಗಳೂರು ಇವರನ್ನು ಮಂಡನಾಧಿಕಾರಿಯಾಗಿ ಮೇಲೆ (1)ರಲ್ಲಿ ಓದಲಾಗಿರುವ ದಿನಾಂಕ: 20.3.2003ರ ಆದೇಶದಲ್ಲಿ ನೇಮಿಸಿ ಆದೇಶವನ್ನು ಹೊರಡಿಸಲಾಗಿದೆ

ಮೇಲೆ 2ರಲ್ಲಿ ಓದಲಾಗಿರುವ ದಿನಾಂಕ:16.7.2003ರ ಪತ್ರವನ್ನು ಅನುಸರಿಸಿ ಮೇಲೆ 3ರಲ್ಲಿ ಓದಲಾಗಿರುವ ದಿನಾಂಕ:24.9.2003ರ ಸರ್ಕಾರಿ ಆದೇಶದಲ್ಲಿ ಶ್ರೀ ಎ.ವಿ. ದೇಶಪಾಂಡೆ, ಜಂಟಿ ಅಭಿಯೋಗ ನಿರ್ದೇಶಕರು(ಆಡಳಿತ), ಅಭಿಯೋಗ ನಿರ್ದೇಶಕರ ಕಛೇರಿ, ಬೆಂಗಳೂರು ಇವರನ್ನು ಮಂಡನಾಧಿಕಾರಿಯಾಗಿ ನೇಮಿಸಿದ ಆದೇಶವನ್ನು ಮಾರ್ಪಡಿಸಿ ಶ್ರೀ ಎಲ್.ಎ. ಜವಳಿ ಅಭಿಯೋಗ ಉಪ ನಿರ್ದೇಶಕರು ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿ ಆದೇಶವನ್ನು ಹೊರಡಿಸಲಾಗಿದೆ.

ಮೇಲೆ 4ರಲ್ಲಿ ಓದಲಾಗಿರುವ ದಿನಾಂಕ:26.4.2006ರ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರ ಪತ್ರದಲ್ಲಿ ವಿಚಾರಣಾ ಧಿಕಾರಿಗಳಾದ ಶ್ರೀ ವಿ.ಹೆಚ್. ಉಪಾಧ್ಯಾಯ ಇವರು ಇಲ್ಲಿಯವರೆಗೆ ವಿಚಾರಣೆ ಪ್ರಾರಂಭಿಸದಿರುವುದರಿಂದ ಅವರ ಬದಲಿಗೆ ಶ್ರೀ ಬಿ. ರಂಗಸ್ವಾಮಿ, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ನಂ. 768, 9ನೇ ಮೈನ್, 3ನೇ ಬ್ಲಾಕ್, 3ನೇ ಸ್ಟೇಜ್, ಬಸವೇಶ್ವರನಗರ, ಬೆಂಗಳೂರು-79 ಇವರನ್ನು ವಿಚಾರಣಾಧಿಕಾರಿಯಾಗಿ ನೇಮಿಸುವಂತೆ ಮತ್ತು ಶ್ರೀ ಎಲ್.ಎ. ಜವಳಿ, ಅಭಿಯೋಗ ಉಪ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರ ಕಛೇರಿ, ಬೆಂಗಳೂರು ಇವರು ದಿನಾಂಕ:31.5.06ರಂದು ನಿವೃತ್ತರಾಗಲಿರುವುದರಿಂದ ಇವರ ಸ್ಥಾನದಲ್ಲಿ ಮಂಡನಾಧಿಕಾರಿಯ ಕರ್ತವ್ಯಗಳನ್ನು ನಿರ್ವಹಿಸಲು ಶ್ರೀ ಎಸ್.ಎನ್. ಪಾಟೀಲ್,ಅಭಿಯೋಗ ಉಪ ನಿರ್ದೇಶಕರು, ಅಭಿಯೋಗ ನಿರ್ದೇಶಕರ ಕಛೇರಿ, ಬೆಂಗಳೂರು ಇವರನ್ನು ಮಂಡನಾಧಿಕಾರಿಯಾಗಿ ನೇಮಿಸುವಂತೆ ಕೋರಿರುತ್ತಾರೆ. ವಿಷಯವನ್ನು ಕೂಲಕಂಷವಾಗಿ ಪರಿಶೀಲಿಸಿ ಕೆಳಕಂಡಂತೆ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ ಒಇ 31 ಪಿಪಿಇ 2005, ಬೆಂಗಳೂರು, ದಿನಾಂಕ: 3ನೇ ಜುಲೈ 2006**

ಪ್ರಸ್ತಾವನೆಯಲ್ಲಿ ಸೂಚಿಸಿರುವ ಕಾರಣಕ್ಕಾಗಿ ದಿನಾಂಕ:20.3.2003 ಮತ್ತು 24.9.2003ರ ಸರ್ಕಾರಿ ಆದೇಶಗಳನ್ನು ಭಾಗಶಃ ಮಾರ್ಪಡಿಸಿ ಸದರಿ ಪ್ರಕರಣದಲ್ಲಿ ಶ್ರೀ ವಿ.ಹೆಚ್. ಉಪಾಧ್ಯಾಯ ಇವರ ಬದಲಿಗೆ ಶ್ರೀ ಬಿ. ರಂಗಸ್ವಾಮಿ, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ನಂ:768, 9ನೇ ಮೈನ್, 3ನೇ ಬ್ಲಾಕ್, 3ನೇ ಸ್ಟೇಜ್, ಬಸವೇಶ್ವರನಗರ, ಬೆಂಗಳೂರು-79 ಇವರನ್ನು ಕರ್ನಾಟಕ ಸರ್ಕಾರ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957 ನಿಯಮ 11 (2) ರನ್ವಯ ವಿಚಾರಣಾಧಿಕಾರಿಯನ್ನಾಗಿ ಮತ್ತು ಶ್ರೀ ಎಲ್.ಎ. ಜವಳಿ ಪ್ರಸ್ತುತ ಮಂಡನಾಧಿಕಾರಿ ಇವರ ಬದಲಿಗೆ ಶ್ರೀ ಎಸ್.ಎನ್. ಪಾಟೀಲ್, ಅಭಿಯೋಗ ಉಪ ನಿರ್ದೇಶಕರು, ಅಭಿಯೋಗ ನಿರ್ದೇಶಕರ ಕಛೇರಿ, ಬೆಂಗಳೂರು

ಇವರನ್ನು ವಿಚಾರಣಾ ಅಧಿಕಾರಿಯವರ ಮುಂದೆ ಸರ್ಕಾರದ ಪರವಾಗಿ ದಾಖಲೆಗಳನ್ನು ಮಂಡಿಸಲು ಕರ್ನಾಟಕ ಸರ್ಕಾರ ಸೇವಾ ನಿಯಮ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ ಷಚ 1957ರ ನಿಯಮ 11(5)(ಸಿ) ರನ್ವಯ ಮಂಡನಾಧಿಕಾರಿಯಾಗಿ ನೇಮಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ. ಕುಲಕರ್ಣಿ**

ಪಿ.ಆರ್. 1013

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಕಾ. ಮತ್ತು ಸು. ಮತ್ತು ಅಭಿಯೋಗಗಳು)

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ಇಲಾಖೆಯಲ್ಲಿ ಮಾನಸಿಕ ಆರೋಗ್ಯ ಕ್ರಿಯಾ ಯೋಜನೆಗಳ ಅನುಷ್ಠಾನಕ್ಕೆ ಹುದ್ದೆಗಳ ಸೃಜಿಸುವ ಕುರಿತು ಆದೇಶ.

**ಓದಲಾಗಿದೆ:**
1. ಕರ್ನಾಟಕ ಉಚ್ಚ ನ್ಯಾಯಾಲಯದ ಆದೇಶದ ರಿಟ್ ಅರ್ಜಿ ಸಂಖ್ಯೆ:18741:96, ದಿನಾಂಕ:16.12.2005.
2. ಸರ್ಕಾರಿ ಆದೇಶ ಸಂಖ್ಯೆ: ಆಕುಕ 790 ಆಯೋಸಂ.03, ಬೆಂಗಳೂರು, ದಿನಾಂಕ:4.12.2003.
3. ಸರ್ಕಾರಿ ಆದೇಶ ಸಂಖ್ಯೆ:ಆಕುಕ 5 ಐಎಂಆ 2004, ದಿನಾಂಕ:4.6.2004.
4. ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು ಇವರ ಇತ್ತೀಚಿನ ಪತ್ರ ಸಂಖ್ಯೆ:ಎಸ್‌ಸಿಡಿಪಿ.6. 2003-04, ದಿನಾಂಕ:1.2.2006.

**ಪ್ರಸ್ತಾವನೆ:**

ಮೇಲೆ ಓದಲಾದ (2)ರ ಆದೇಶದಲ್ಲಿ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು ಇಲಾಖೆಯಲ್ಲಿ ರಾಜ್ಯದಲ್ಲಿನ ಮಾನಸಿಕ ರೋಗಿಗಳಿಗೆ ಚಿಕಿತ್ಸೆಯನ್ನು ಉತ್ತಮಪಡಿಸಲು ಹಾಗೂ ಜಿಲ್ಲಾ ಆಸ್ಪತ್ರೆಗಳಲ್ಲಿ ಸೂಕ್ತ ಮಾನಸಿಕ ಚಿಕಿತ್ಸಾ ಸೌಲಭ್ಯಗಳನ್ನು ಒದಗಿಸಲು ಕ್ರಿಯಾ ಯೋಜನೆಯನ್ನು ಜಾರಿಗೊಳಿಸಲು ಸರ್ಕಾರವು ಆದೇಶಿಸಿದೆ. ಹಾಗೂ ಮೇಲೆ ಓದಲಾದ (3)ರ ಆದೇಶದಲ್ಲಿ ಮಾನಸಿಕ ಆರೋಗ್ಯ ಕ್ರಿಯಾ ಯೋಜನೆಯಡಿಯಲ್ಲಿ ಹೊಸ ಜಿಲ್ಲೆಗಳಾದ ಕೊಪ್ಪಳ, ಹಾವೇರಿ, ಚಾಮರಾಜನಗರ, ಬಾಗಲಕೋಟೆ ಹಾಗೂ ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ 5 ಮನೋರೋಗ ತಜ್ಞರ ಹುದ್ದೆಗಳನ್ನು ಸೃಜಿಸಲು ಮಂಜೂರಾತಿಯನ್ನು ನೀಡಲಾಗಿದೆ. ಮೇಲೆ ಓದಲಾದ (4)ರ ಪತ್ರದಲ್ಲಿ ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಇವರು ಕರ್ನಾಟಕ ಉಚ್ಚ ನ್ಯಾಯಾಲಯದ ಆದೇಶದ ಪ್ರಕಾರ ಮಾನಸಿಕ ಆರೋಗ್ಯ ಕ್ರಿಯಾ ಯೋಜನೆಯಡಿಯಲ್ಲಿ 13 ಜಿಲ್ಲಾ ಆಸ್ಪತ್ರೆಗಳಲ್ಲಿ ಕ್ಲಿನಿಕಲ್ ಸೈಕಾಲಜಿಸ್ಟ್ ಹುದ್ದೆಗಳನ್ನು ಸೃಜಿಸುವುದು ಅವಶ್ಯವಾಗಿರುತ್ತದೆ. ಈ 14 ಆಸ್ಪತ್ರೆಗಳಲ್ಲದೆ, 27 ಜಿಲ್ಲೆಗಳ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಕಛೇರಿಗಳಲ್ಲಿ ಪ್ರತಿ ಜಿಲ್ಲೆಗೆ ಒಬ್ಬರಂತೆ 27 ಹುದ್ದೆಗಳು ಒಟ್ಟು 41 ಕ್ಲಿನಿಕಲ್ ಸೈಕಾಲಜಿಸ್ಟ್ ಹುದ್ದೆಗಳನ್ನು ಸೃಜಿಸಲು ಕೋರಿರುತ್ತಾರೆ.

ಈಗಾಗಲೇ ರಾಯಚೂರು, ಮಂಡ್ಯ, ಗುಲ್ಬರ್ಗಾ ಮತ್ತು ಬೆಳಗಾವಿ ಜಿಲ್ಲೆಗಳ ಜಿಲ್ಲಾ ಆಸ್ಪತ್ರೆಗೆ ತಲಾ ಒಬ್ಬರಂತೆ 4 ಸೈಕಿಯಾಟ್ರಿಕ ಸೋಶಿಯಲ್ ವರ್ಕರ್ ಹುದ್ದೆಗಳು ಮಂಜೂರಾಗಿದ್ದು, ಇನ್ನುಳಿದ ಜಿಲ್ಲಾ ಆಸ್ಪತ್ರೆಗಳಿಗೆ 23 ಸೈಕಿಯಾಟ್ರಿಕ್ ಸೋಶಿಯಲ್ ವರ್ಕರ ಹುದ್ದೆಗಳನ್ನು ಸೃಜಿಸಬೇಕಾಗಿದ್ದು. ಇದಲ್ಲದೆ ಪ್ರತಿ ಜಿಲ್ಲೆಗೊಂದರಂತೆ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಕಛೇರಿಯಲ್ಲಿ ಜಿಲ್ಲಾ ಮಾನಸಿಕ ಆರೋಗ್ಯ ಕಾರ್ಯಕ್ರಮಕ್ಕಾಗಿ 27 ಹುದ್ದೆಗಳನ್ನು ಸೃಜಿಸಬೇಕಾಗಿದ್ದು ಒಟ್ಟು 50 ಸೈಕಿಯಾಟ್ರಿಕ್ ಸೋಶಿಯಲ್ ವರ್ಕರ್ ಹುದ್ದೆಗಳನ್ನು ಸೃಜಿಸುವಂತೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಸರ್ಕಾರವು ಈ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಆಕುಕ 5 ಬಿಎಂಆ 2004, ಬೆಂಗಳೂರು, ದಿನಾಂಕ:15ನೇ ಜೂನ್ 2006**

ಪ್ರಸ್ತಾವನೆಯನ್ನು ವಿವರಿಸಿರುವಂತೆ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ಇಲಾಖೆಯಲ್ಲಿ ಮಾನಸಿಕ ಆರೋಗ್ಯ ಕ್ರಿಯಾ ಯೋಜನೆಯಡಿ ಪ್ರಥಮ ಹಂತದಲ್ಲಿ ಈ ಆದೇಶದೊಂದಿಗೆ ಲಗತ್ತಿಸಿರುವ ಅನುಬಂಧದಲ್ಲಿ ತೋರಿಸಿರುವ ಜಿಲ್ಲಾ ಆಸ್ಪತ್ರೆಗಳಿಗೆ ಅವಶ್ಯವಿರುವ ವೇತನ ಶ್ರೇಣಿ ರೂ.6000-11200 ರಲ್ಲಿ 9 ಕ್ಲಿನಿಕಲ್ ಹುದ್ದೆಗಳು ಹಾಗೂ ವೇತನ ಶ್ರೇಣಿ ರೂ.4150-7800 ರಲ್ಲಿ 23 ಸೈಕಿಯಾಟ್ರಿಕ್ ಸೋಶೀಯಲ್ ವರ್ಕರ್ಸ್ ಹುದ್ದೆಗಳನ್ನು ಸೃಜಿಸಲು ಸರ್ಕಾರದ ಮಂಜೂರಾತಿ ನೀಡಿದೆ.

ಈ ನೇರ ನೇಮಕಾತಿ ಹುದ್ದೆಗಳನ್ನು ನಿಯಮಾನುಸಾರ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿರುವ ವಿಶೇಷ ನೇರ ನೇಮಕಾತಿ ಸಮಿತಿಯ ಮೂಲಕ ಆಯ್ಕೆ ಮಾಡಿ ಭರ್ತಿ ಮಾಡಲು ಆದೇಶಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ:ಆಇ. 465. ವೆಚ್ಚ-5.2006, ದಿನಾಂಕ:5.6.2006ರ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಎನ್. ಕೃಷ್ಣಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

**ಸರ್ಕಾರಿ ಆದೇಶ ಸಂಖ್ಯೆ:ಆಕುಕ 5 ಐಎಂಆ 2004, ದಿನಾಂಕ: 15ನೇ ಜೂನ್ 2006**

**ಅನುಬಂಧ-I**

**1. ಜಿಲ್ಲಾ ಆಸ್ಪತ್ರೆಗಳಲ್ಲಿ ಸೃಜಿಸಲಾದ ಕ್ಲಿನಿಕಲ್ ಸೈಕಾಲಜಿಸ್ಟ್ ಹುದ್ದೆ-9**

| | | | |
|---|---|---|---|
| 1 | ಚಾಮರಾಜನಗರ | 2 | ಕೊಪ್ಪಳ |
| 3 | ಬಾಗಲಕೋಟೆ | 4 | ಬಳ್ಳಾರಿ |
| 5 | ಉಡುಪಿ | 6 | ಬೆಂಗಳೂರು (ಗ್ರಾಮಾಂತರ) |
| 7 | ಕೆ.ಸಿ. ಜನರಲ್ ಆಸ್ಪತ್ರೆ, ಬೆಂಗಳೂರು | 8 | ಜಯದೇವ ಸಾರ್ವಜನಿಕ ಆಸ್ಪತ್ರೆ, ಬೆಂಗಳೂರು |
| 9 | ಕೇಂದ್ರೀಯ ಕಾರಾಗೃಹ ಆಸ್ಪತ್ರೆ, ಬೆಂಗಳೂರು | | |

**2. ಜಿಲ್ಲಾ ಆಸ್ಪತ್ರೆ ಹಾಗೂ ಪ್ರಮುಖ ಆಸ್ಪತ್ರೆಗಳಲ್ಲಿ ಸೃಜಿಸಲಾದ ಸೈಕಿಯಾಟ್ರಿಕ್ ಸೋಶಿಯಲ್ ವರ್ಕರ್ಸ್ ಹುದ್ದೆಗಳು-23**

| | | | |
|---|---|---|---|
| 1 | ಬೀದರ್ | 2 | ಕಾರವಾರ |
| 3 | ಚಾಮರಾಜನಗರ | 4 | ಹಾಸನ |
| 5 | ಕೊಪ್ಪಳ | 6 | ಹಾವೇರಿ |
| 7 | ಚಿತ್ರದುರ್ಗ | 8 | ಕೊಡಗು |
| 9 | ಬಾಗಲಕೋಟೆ | 10 | ಚಿಕ್ಕಮಗಳೂರು |
| 11 | ಗದಗ | 12 | ಬಿಜಾಪುರ |
| 13 | ಬಳ್ಳಾರಿ | 14 | ದಾವಣಗೆರೆ |
| 15 | ಶಿವಮೊಗ್ಗ | 16 | ಕೋಲಾರ |
| 17 | ತುಮಕೂರು | 18 | ಮಂಗಳೂರು |
| 19 | ಉಡುಪಿ | 20 | ಬೆಂಗಳೂರು ಗ್ರಾಮಾಂತರ |
| 21 | ಕೆ.ಸಿ. ಜನರಲ್ ಆಸ್ಪತ್ರೆ, ಬೆಂಗಳೂರು | 22 | ಜಯದೇವ ಸಾರ್ವಜನಿಕ ಆಸ್ಪತ್ರೆ, ಬೆಂಗಳೂರು |
| 23 | ಕೇಂದ್ರೀಯ ಕಾರಾಗೃಹ ಆಸ್ಪತ್ರೆ, ಬೆಂಗಳೂರು | | |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಎನ್. ಕೃಷ್ಣಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

ಪಿ.ಆರ್. 1015

## ಕಂದಾಯ ಸಚಿವಾಲಯ

**ವಿಷಯ:** ಶ್ರೀ ಕೃಷ್ಣಪ್ಪ ಪೂಜಾರಿ, ಹಿಂದಿನ ತಹಶೀಲ್ದಾರ್ ಬಂಟ್ವಾಳ (ಈಗ ನಿವೃತ್ತರು) ಹಾಗೂ ಇತರರ ವಿರುದ್ಧದ ಜಂಟಿ ಇಲಾಖಾ ವಿಚಾರಣೆ-ಶ್ರೀ ಲಕ್ಷ್ಮಣಭಟ್, ಶಿರಸ್ತೇದಾರ ಇವರನ್ನು ಆರೋಪ ಮುಕ್ತರನ್ನಾಗಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ:ಆರ್.ಡಿ.60.ಎಡಿಇ:2004, ದಿನಾಂಕ:21.12.2004.
2. ಶ್ರೀ ಎನ್.ಸಿ. ಲಕ್ಷ್ಮೀನರಸಿಂಹಯ್ಯ, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ಹಾಗೂ ವಿಚಾರಣಾಧಿಕಾರಿಗಳು ಇವರ ದಿನಾಂಕ:31.5.2005 ರ ವಿಚಾರಣಾ ವರದಿ.

**ಪ್ರಸ್ತಾವನೆ:**

ಬಂಟ್ವಾಳ ತಾಲ್ಲೂಕು ಕೇಪು ಗ್ರಾಮದ ಟಿ.ಎನ್.ಸಿ.ನಂ. 1111:74-75ನೇ ಕಡತದಲ್ಲಿನ ಮೂಲ ತೀರ್ಪನ್ನು ಹಾಗೂ ಮೂಲ ಮಂಜೂರುದಾರರ ಹೆಸರನ್ನು ಅಕ್ರಮವಾಗಿ ತಿದ್ದಿದ ಮತ್ತು ಎರಡನೇ ಸಲ ಫಾರಂ ನಂ.10ನ್ನು ನೀಡಿದ ಬಗ್ಗೆ ಬಂಟ್ವಾಳ:ತಾಲ್ಲೂಕಿನ ಹಿಂದಿನ ತಹಶೀಲ್ದಾರರಾದ ಶ್ರೀ ಕೃಷ್ಣಪ್ಪ ಪೂಜಾರಿ,ಶ್ರೀ ಲಕ್ಷ್ಮಣಭಟ್, ಶಿರಸ್ತೇದಾರ್, ಶ್ರೀ ಇಬ್ರಾಹಿಂ, ಕಂದಾಯ ನಿರೀಕ್ಷಕರು ಶ್ರೀ ಪ್ರಸನ್ನ ಕುಮಾರ್ ಪಕ್ಕಳ, ಗ್ರಾಮ ಕರಣಿಕ ಹಾಗೂ ಶ್ರೀ ಉಮೇಶಮರೋಳಿ, ದ್ವಿ.ದ.ಸ. ಇವರುಗಳ ವಿರುದ್ಧ ಶಿಸ್ತು ಕ್ರಮ ಜರುಗಿಸಲು ಶ್ರೀ ಎನ್.ಸಿ. ಲಕ್ಷ್ಮೀನರಸಿಂಹಯ್ಯ, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ಮೇಲೆ (1)ರಲ್ಲಿ ಓದಲಾದ ದಿನಾಂಕ:21.12.2004ರ ಸರ್ಕಾರಿ ಆದೇಶದಲ್ಲಿ ನೇಮಿಸಲಾಗಿತ್ತು.

ಈ ಪ್ರಕರಣದಲ್ಲಿ ವಿಚಾರಣಾಧಿಕಾರಿಗಳು ಜಂಟಿ ಇಲಾಖಾ ವಿಚಾರಣೆ ಜರುಗಿಸಿ ಮೇಲೆ ಕ್ರ.ಸಂ. (2)ರಲ್ಲಿ ಓದಲಾದ ದಿನಾಂಕ:31.5.2005 ರಂದು ತಮ್ಮ ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದ್ದು, ಅದರಲ್ಲಿ ಶ್ರೀ ಕೃಷ್ಣಪ್ಪ ಪೂಜಾರಿ, ಹಿಂದಿನ ತಹಶೀಲ್ದಾರ್, ಬಂಟ್ವಾಳ (ಈಗ ನಿವೃತ್ತರು) ಶ್ರೀ ಇಬ್ರಾಹಿಂ, ಕಂದಾಯ ನಿರೀಕ್ಷಕ, ಶ್ರೀ ಪ್ರಸನ್ನ ಕಮಾರ್ ಪಕ್ಕಳ, ಗ್ರಾಮ ಕರಣಿಕ ಮತ್ತು ಶ್ರೀ ಉಮೇಶಮರೋಳಿ, ದ್ವಿ.ದ.ಸ.ಇವರ ವಿರುದ್ಧ ದ ಆರೋಪಗಳು ಸಾಬೀತಾಗಿಯೆಂದು ಹಾಗೂ ಶ್ರೀ ಲಕ್ಷ್ಮಣಭಟ್, ಶಿರಸ್ತೆದಾರ್ ಇವರ ವಿರುದ್ಧದ ಆರೋಪಗಳು ಸಾಬೀತಾಗಿರುವುದಿಲ್ಲವೆಂದು ವರದಿ ಮಾಡಿರುತ್ತಾರೆ. ಶ್ರೀ ಕೃಷ್ಣಪ್ಪ ಪೂಜಾರಿ ಮತ್ತಿತರರಿಗೆ ದಂಡನೆ ವಿಧಿಸುವ ಬಗ್ಗೆ ಪ್ರತ್ಯೇಕವಾಗಿ ಕ್ರಮ ಜರುಗಿಸಲಾಗುತ್ತಿದೆ.

ವಿಚಾರಣಾಧಿಕಾರಿಗಳು ಸರ್ಕಾರಕ್ಕೆ ಸಲ್ಲಿಸಿದ್ದ ವಿಚಾರಣಾ ವರದಿ ಹಾಗೂ ಅದಕ್ಕೆ ಸಂಬಂಧಪಟ್ಟ ದಾಖಲಾತಿಗಳನ್ನು ಪರಿಶೀಲಿಸಿ ಸರ್ಕಾರವು ವಿಚಾರಣಾಧಿಕಾರಿಗಳ ವರದಿಯನ್ನು ಒಪ್ಪಿಕೊಂಡು ಶ್ರೀ ಲಕ್ಷ್ಮಣಭಟ್ ಶಿರಸ್ತೇದಾರ್ ಇವರ ವಿರುದ್ಧದ ಆರೋಪಗಳು ಸಾಬೀತಾಗದಿರುವುದು ಸ್ಪಷ್ಟವಾಗಿರುವುದರಿಂದ ಅವರನ್ನು ಆರೋಪ ಮುಕ್ತರನ್ನಾಗಿಸಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಆರ್‌ಡಿ:60:ಎಡಿಇ:2004, ಬೆಂಗಳೂರು, ದಿನಾಂಕ: 29ನೇ ಜೂನ್ 2006**

ಪ್ರಸ್ತಾವನೆಯಲ್ಲಿ ಕೂಲಂಕಷವಾಗಿ ಪರಿಶೀಲಿಸಿರುವ ಹಿನ್ನಲೆಯಲ್ಲಿ ಶ್ರೀ ಲಕ್ಷ್ಮಣಭಟ್, ಶಿರಸ್ತೇದಾರ ಇವರ ವಿರುದ್ಧ ದಿನಾಂಕ:21.12.2004ರ ಸರ್ಕಾರಿ ಆದೇಶ ಸಂಖ್ಯೆ:ಆರ್‌ಡಿ:60:ಎಡಿಇ:2004 ರಲ್ಲಿ ಹೊರಿಸಲಾದ ಆರೋಪಗಳಿಂದ ಮುಕ್ತಗೊಳಿಸಲಾಗಿದೆ.

ಈ ಪ್ರಕರಣದ ಮಟ್ಟಿಗೆ ಸಂಬಂಧಿಸಿದಂತೆ ಶ್ರೀ ಲಕ್ಷ್ಮಣಭಟ್, ಶಿರಸ್ತೇದಾರ್ ಇವರ ವಿರುದ್ಧ ಈ ಇಲಾಖಾ ವಿಚಾರಣೆಯು ನಡೆಯದಿದ್ದಲ್ಲಿ ಅವರು ಯಾವ ಸೇವಾ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಿದ್ದರೊ ಅಂತಹ ಸೇವಾ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಾರೆ

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ಶ್ರೀಮತಿ ಚಂದ್ರಶೇಖರ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಸೇವೆಗಳು-3)

ಪಿ.ಆರ್. 1016

**ವಿಷಯ:** ಶ್ರೀ ಕೃಷ್ಣಪ್ಪ ಪೂಜಾರಿ, ಹಿಂದಿನ ತಹಿಶೀಲ್ದಾರ್ ಬಂಟ್ವಾಳ (ಈಗ ನಿವೃತ್ತರು) ಹಾಗೂ ಇತರರ ವಿರುದ್ಧದ ಜಂಟಿ ಇಲಾಖಾ ವಿಚಾರಣೆ ಶ್ರೀ ಇಬ್ರಾಹಿಂ, ಕಂದಾಯ ನಿರೀಕ್ಷಕ, ಶ್ರೀ ಪ್ರಸನ್ನಕುಮಾರ ಪಕ್ಕಳ, ಗ್ರಾಮ ಲೆಕ್ಕಿಗ ಹಾಗೂ ಶ್ರೀ ಉಮೇಶಮರೋಳಿ, ದ್ವಿ.ದ.ಸ. ಇವರುಗಳಿಗೆ ದಂಡನೆ ವಿಧಿಸಿ ಅಂತಿಮ ಆದೇಶ ಹೊರಡಿಸುವ ಬಗ್ಗೆ .

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ:ಆರ್.ಡಿ.60.ಎಡಿಇ:2004, ದಿನಾಂಕ:21.12.2004.
2. ಶ್ರೀ ಎನ್.ಸಿ. ಲಕ್ಷ್ಮೀನರಸಿಂಹಯ್ಯ, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ಹಾಗೂ ವಿಚಾರಣಾಧಿಕಾರಿಗಳು ಇವರ ದಿನಾಂಕ:31.5.2005 ರ ವಿಚಾರಣಾ ವರದಿ.
3. ಎರಡನೇ ಕಾರಣ ಕೇಳುವ ನೋಟೀಸು ಸಂಖ್ಯೆ:ಆರ್.ಡಿ.60.ಎ.ಡಿ.ಇ. 2004 ದಿನಾಂಕ: 5.9.2005.
4. ಲಿಖಿತ ಸಮಜಾಯಿಷಿಗಳು:
   1. ಶ್ರೀ ಇಬ್ರಾಹಿಂ, ದಿನಾಂಕ:26.9.2005.
   2. ಶ್ರೀ ಪ್ರಸನ್ನ ಕುಮಾರ್ ಪಕ್ಕಳ, ದಿನಾಂಕ:1.10.2005.
   3. ಶ್ರೀ ಉಮೇಶಮರೋಳಿ, ದಿನಾಂಕ:20.9.2005.

**ಪ್ರಸ್ತಾವನೆ:**

ಬಂಟ್ವಾಳ ತಾಲ್ಲೂಕು ಕೇಪು ಗ್ರಾಮದ ಟಿ.ಎನ್.ಸಿ.ನಂ. 1111:74-75ನೇ ಕಡತದಲ್ಲಿನ ಮೂಲ ತೀರ್ಪನ್ನು ಹಾಗೂ ಮೂಲ ಮಂಜೂರುದಾರರ ಹೆಸರನ್ನು ಅಕ್ರಮವಾಗಿ ತಿದ್ದಿದ ಮತ್ತು ಎರಡನೇ ಸಲ ಫಾರಂ ನಂ.10ನ್ನು ನೀಡಿದ ಬಗ್ಗೆ ಬಂಟ್ವಾಳ:ತಾಲ್ಲೂಕಿನ ಹಿಂದಿನ ತಹಶೀಲ್ದಾರರಾದ ಶ್ರೀ ಕೃಷ್ಣಪ್ಪ ಪೂಜಾರಿ,ಶ್ರೀ ಲಕ್ಷ್ಮಣಭಟ್, ಶಿರಸ್ತೇದಾರ್, ಶ್ರೀ ಇಬ್ರಾಹಿಂ, ಕಂದಾಯ ನಿರೀಕ್ಷಕರು ಶ್ರೀ ಪ್ರಸನ್ನ ಕುಮಾರ್ ಪಕ್ಕಳ, ಗ್ರಾಮ ಕರಣಿಕ ಹಾಗೂ ಶ್ರೀ ಉಮೇಶಮರೋಳಿ, ದ್ವಿ.ದ.ಸ. ಇವರುಗಳ ವಿರುದ್ಧ ಶಿಸ್ತು ಕ್ರಮ ಜರುಗಿಸಲು ಶ್ರೀ ಎನ್.ಸಿ. ಲಕ್ಷ್ಮೀನರಸಿಂಹಯ್ಯ, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ಮೇಲೆ ಕ್ರ.ಸಂ. (1)ರಲ್ಲಿ ಓದಲಾದ ದಿನಾಂಕ:21.12.2004ರ ಸರ್ಕಾರಿ ಆದೇಶದಲ್ಲಿ ನೇಮಿಸಲಾಗಿತ್ತು.

ಈ ಪ್ರಕರಣದಲ್ಲಿ ವಿಚಾರಣಾಧಿಕಾರಿಗಳು ಜಂಟಿ ಇಲಾಖಾ ವಿಚಾರಣೆ ಜರುಗಿಸಿ ಮೇಲೆ ಕ್ರ.ಸಂ. (2)ರಲ್ಲಿ ಓದಲಾದ ದಿನಾಂಕ: 31.5.2005ರಂದು ತಮ್ಮ ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದ್ದು, ಆದರಲ್ಲಿ ಶ್ರೀ ಕೃಷ್ಣಪ್ಪ ಪೂಜಾರಿ, ಹಿಂದಿನ ತಹಶೀಲ್ದಾರ್, ಬಂಟ್ವಾಳ (ಈಗ ನಿವೃತ್ತರು) ಶ್ರೀ ಇಬ್ರಾಹಿಂ, ಕಂದಾಯ ನಿರೀಕ್ಷಕ, ಶ್ರೀ ಪ್ರಸನ್ನ ಕಮಾರ್ ಪಕ್ಕಳ, ಗ್ರಾಮ ಕರಣಿಕ ಮತ್ತು ಶ್ರೀ ಉಮೇಶಮರೋಳಿ, ದ್ವಿ.ದ.ಸ.ಇವರ ವಿರುದ್ಧದ ಆರೋಪಗಳು ಸಾಬೀತಾಗಿರುವುದಿಲ್ಲವೆಂದು ವರದಿ ಮಾಡಿರುತ್ತಾರೆ.

ವಿಚಾರಣಾಧಿಕಾರಿಯವರ ವರದಿಯಂತೆ ಶ್ರೀ ಇಬ್ರಾಹಿಂ, ಶ್ರೀ ಪ್ರಸನ್ನ ಕುಮಾರ್ ಪಕ್ಕಳ ಹಾಗೂ ಶ್ರೀ ಉಮೇಶಮರೋಳಿ ಇವರುಗಳಿಗೆ ಮೇಲೆ ಕ್ರ.ಸಂ (3)ರಲ್ಲಿ ಓದಲಾದ ಎರಡನೇ ಕಾರಣ ಕೇಳುವ ನೋಟೀಸುಗಳನ್ನು ನೀಡಲಾಗಿದೆ. ಹಾಗೂ ಈ ನೋಟೀಸಿಗೆ ಇವರುಗಳು ತಮ್ಮ ಲಿಖಿತ ಸಮಜಾಯಿಷಿಯನ್ನು ನೀಡಿ ತಮ್ಮ ವಿರುದ್ಧ ಮಾಡಲಾದ ಆರೋಪಗಳು ಸಾಬೀತಾಗಿರುವುದನ್ನು ಒಪ್ಪಿಕೊಂಡಿರುವುದಿಲ್ಲ ಹಾಗೂ ತಮ್ಮನ್ನು ದೋಷಮುಕ್ತರನ್ನಾಗಿ ಮಾಡಬೇಕಾಗಿ ಕೋರಿಕೊಂಡಿರುತ್ತಾರೆ. ಶ್ರೀ ಕೃಷ್ಣಪ್ಪ ಪೂಜಾರಿ, ನಿವೃತ್ತ ತಹಶೀಲ್ದಾರ್ ಇವರಿಗೆ ದಂಡನೆ ವಿಧಿಸುವ ಬಗ್ಗೆ ಪ್ರತ್ಯೇಕವಾಗಿ ಕ್ರಮ ಜರುಗಿಸಲಾಗುತ್ತಿದೆ.

ಈ ಪ್ರಕರಣದಲ್ಲಿನ ವಿಚಾರಣಾ ವರದಿ ಹಾಗೂ ಆರೋಪಿತರು ಸಲ್ಲಿಸಿರುವ ಲಿಖಿತ ಹೇಳಿಕೆ ಇವುಗಳನ್ನು ದಾಖಲೆಗಳ ಆಧಾರದಿಂದ ಪರಿಶೀಲಿಸಲಾಗಿ, ಶ್ರೀ ಇಬ್ರಾಹಿಂ ಶ್ರೀ ಪ್ರಸನ್ನ ಕುಮಾರ್ ಪಕ್ಕಳ ಹಾಗೂ ಶ್ರೀ ಉಮೇಶಮರೋಳಿ ಇವರುಗಳು ಕರ್ತವ್ಯ ಚ್ಯುತಿ ಎಸಗಿರುವುದು ಸಾಬೀತಾಗಿರುವ ಹಿನ್ನಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಆರ್‌ಡಿ:60:ಎಡಿಇ:2004, ಬೆಂಗಳೂರು, ದಿನಾಂಕ: 29ನೇ ಜೂನ್ 2006**

ಪ್ರಸ್ತಾವನೆಯನ್ನು ಕೂಲಕಂಷವಾಗಿ ಪರಿಶೀಲಿಸಿರುವ ಹಿನ್ನಲೆಯಲ್ಲಿ ಕೆ.ಸಿ.ಎಸ್. (ಸಿಸಿಎ) ನಿಯಮಾವಳಿ ನಿಯಮ 8 ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಇಬ್ರಾಹಿಂ, ಕಂದಾಯ ನಿರೀಕ್ಷಕ, ಶ್ರೀ ಪ್ರಸನ್ನ ಕುಮಾರ್ ಪಕ್ಕಳ ಗ್ರಾಮಲೆಕ್ಕಿಗ ಹಾಗೂ ಶ್ರೀ ಉಮೇಶಮರೋಳಿ, ದ್ವಿ.ದ.ಸ. ಇವರುಗಳಿಗೆ ಕೆಳಕಂಡಂತೆ ದಂಡನೆ ವಿಧಿಸಲು ಆದೇಶಿಸಿದೆ.

| | |
|---|---|
| 1. ಶ್ರೀ ಇಬ್ರಾಹಿಂ, ಕಂದಾಯ ನಿರೀಕ್ಷಕ | ಕೆಸಿಎಸ್ (ಸಿಸಿಎ) ನಿಯಮಾವಳಿ ನಿಯಮ 8(iii) ಅನ್ವಯ ಎರಡು ವಾರ್ಷಿಕ ವೇತನ ಬಡ್ತಿಗಳನ್ನು ಸಂಚಿತ ಪರಿಣಾಮ ರಹಿತವಾಗಿ ತಡೆಹಿಡಿಯುವುದು. |
| 2. ಶ್ರೀ ಪ್ರಸನ್ನಕುಮಾರ್ ಪಕ್ಕಳ, ಗ್ರಾಮ ಲೆಕ್ಕಿಗ | ಕೆಸಿಎಸ್ (ಸಿಸಿಎ) ನಿಯಮಾವಳಿ ನಿಯಮ 8(iii) ಅನ್ವಯ ಎರಡು ವಾರ್ಷಿಕ ವೇತನ ಬಡ್ತಿಗಳನ್ನು ಸಂಚಿತ ಪರಿಣಾಮ ರಹಿತವಾಗಿ ತಡೆಹಿಡಿಯುವುದು. |
| 3. ಶ್ರೀ ಉಮೇಶಮರೋಳಿ ದ್ವಿತೀಯ ದರ್ಜೆ ಸಹಾಯಕ | ಕೆಸಿಎಸ್ (ಸಿಸಿಎ) ನಿಯಮಾವಳಿ ನಿಯಮ 8(iii) ಅನ್ವಯ ಎರಡು ವಾರ್ಷಿಕ ವೇತನ ಬಡ್ತಿಗಳನ್ನು ಸಂಚಿತ ಪರಿಣಾಮ ರಹಿತವಾಗಿ ತಡೆಹಿಡಿಯುವುದು. |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ಶ್ರೀಮತಿ ಚಂದ್ರಶೇಖರ**

ಪಿ.ಆರ್. 1017

ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಸೇವೆಗಳು-3)

## ಕನ್ನಡ ಮತ್ತು ಸಂಸ್ಕೃತಿ ಸಚಿವಾಲಯ

**ವಿಷಯ:** ನಿರ್ದೇಶಕರು, ರಾಜ್ಯ ಪತ್ರಾಗಾರ ಇಲಾಖೆ ಅವರಿಗೆ ಉತ್ತರಾಂಚಲದ ಡೆಹರಾಡೂನ್‌ನಲ್ಲಿ ನಡೆಯುವ ರಾಷ್ಟ್ರೀಯ ಪತ್ರಪಾಲಕರ ಸಮಿತಿಯ 42ನೇ ಮಹಾಸಭೆಯಲ್ಲಿ ಭಾಗವಹಿಸಲು ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ:** ನಿರ್ದೇಶಕರು, ರಾಜ್ಯ ಪತ್ರಾಗಾರ ಇಲಾಖೆ ಅವರ ಪತ್ರ ಸಂಖ್ಯೆ: ಎಆರ್‌ಎಸ್ 18 ಎನ್‌ಎಐ 2006 ದಿನಾಂಕ:1.6.2006.

ನಿರ್ದೇಶಕರು ರಾಜ್ಯ ಪತ್ರಾಗಾರ ಇಲಾಖೆ ಅವರು ಮೇಲೆ ಓದಲಾದ ದಿನಾಂಕ:1.6.2005ರ ಪತ್ರದಲ್ಲಿ ರಾಷ್ಟ್ರೀಯ ಪತ್ರಪಾಲಕರ ಸಮಿತಿಯ 42ನೇ ಮಹಾಸಭೆಯು ಉತ್ತರಾಂಚಲದ ಡೆಹರಾಡೂನ್‌ನಲ್ಲಿ 19 ಮತ್ತು 20ನೇ ಜೂನ್ 2006ರಂದು ನಡೆಯಲಿದ್ದು ಸದರಿ ಸಭೆಗೆ ಹಾಜರಾಗಲು ಅನುಮತಿ ಕೋರಿದ್ದಾರೆ. ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ:ಸಂಕಇ16 ರಾಪಸ 2006, ಬೆಂಗಳೂರು, ದಿನಾಂಕ: 4ನೇ ಜುಲೈ 2006**

ರಾಷ್ಟ್ರೀಯ ಪತ್ರಾಗಾರ ನವದೆಹಲಿ ಇದರ ಆಶ್ರಯದಲ್ಲಿ ಉತ್ತರಾಂಚಲದ ಡೆಹರಾಡೂನ್‌ನಲ್ಲಿ 19ಮತ್ತು 20ನೇ ಜೂನ್ 2006 ರಂದು ನಡೆಯುವ ರಾಷ್ಟ್ರೀಯ ಪತ್ರಪಾಲಕರ ಸಮಿತಿಯ 42ನೇ ಮಹಾಸಭೆಯಲ್ಲಿ ಭಾಗವಹಿಸಲು ನಿರ್ದೇಶಕರು, ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆ, ಬೆಂಗಳೂರು ಅವರಿಗೆ ಈ ಮೂಲಕ ಸರ್ಕಾರದ ಅನುಮತಿ ನೀಡಲಾಗಿದೆ.

ಸಭೆಯಿಂದ ಹಿಂದಿರುಗಿದ ನಂತರ ಸಭೆಯ ವಿವರ ಕುರಿತು ನಿರ್ದೇಶಕರು ಒಂದು ವರದಿಯನ್ನು ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ಶಿವರಾಮ್**

ಪಿ.ಆರ್. 1018

ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ ಇಲಾಖೆ (ಆಡಳಿತ ಕನ್ನಡ)

**ವಿಷಯ:** ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಅವರಿಗೆ ವಿಷಯಗಳನ್ನು ಹಂಚಿಕೆ ಮಾಡುವ ಬಗ್ಗೆ

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂ:ಸಂಕಇ 34 ಕಸನಿ 2006 ಬೆಂಗಳೂರು, ದಿನಾಂಕ:7.6.2006.
2. ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆರವರ ದಿನಾಂಕ:22.6.2006ರ ಮನವಿ

**ಪ್ರಸ್ತಾವನೆ:**

ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಆಯುಕ್ತರು ಹಾಗೂ ನಿರ್ದೇಶಕರ ನಡುವೆ ವ್ಯವಹಾರಗಳನ್ನು ಹಂಚಿ ಮೇಲೆ (1)ರಲ್ಲಿ ಓದಲಾದ ದಿನಾಂಕ:7.6.2006 ರ ಸರ್ಕಾರಿ ಆದೇಶದಲ್ಲಿ ನಿರ್ದೇಶನಗಳನ್ನು ನೀಡಲಾಯಿತು. ನಿರ್ದೇಶಕರು ಕನ್ನಡ ಮತ್ತು ಸಂಸ್ಕೃತಿ ಇಲಾಖೆಯವರು ಮೇಲೆ (2) ರಲ್ಲಿ ಓದಲಾದ ದಿನಾಂಕ:22.6.2006ರಲ್ಲಿ ಮನವಿ ಸಲ್ಲಿಸಿ, ತಮಗೆ ಸ್ವತಂತ್ರ ಕಾರ್ಯಗಳನ್ನು ಹಂಚಿಕೆ ಮಾಡುವಂತೆ ಕೋರಿದ್ದಾರೆ. ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸಿದೆ.

**ಆದೇಶ ಸಂಖ್ಯೆ:ಸಂಕಇ 34 ಕಸನಿ 2006, ಬೆಂಗಳೂರು, ದಿನಾಂಕ: 1ನೇ ಜುಲೈ 2006**

ಆಯುಕ್ತರು ಮತ್ತು ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಅವರುಗಳ ನಡುವೆ ಕೆಲಸ ಕಾರ್ಯಗಳನ್ನು ಹಂಚಿ ಹೊರಡಿಸಲಾದ ದಿನಾಂಕ:7.6.2006ರ ಸರ್ಕಾರಿ ಆದೇಶವನ್ನು ಭಾಗಶಃ ಮಾರ್ಪಡಿಸಿದ ಸರ್ಕಾರವು ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಅವರಿಗೆ ಈ ಮುಂದಿನಂತೆ ನಿರ್ದಿಷ್ಟ ಕಾರ್ಯಗಳನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಂಚಿಕೆ ಮಾಡುತ್ತದೆ.

| ಕ್ರ. ಸಂ. | ವಿಷಯ | ಕ್ರ. ಸಂ. | ವಿಷಯ |
|---|---|---|---|
| 1. | ಅನುದಾನ ಮತ್ತು ಅನುದಾನಿತ ಸಂಸ್ಥೆಗಳು | 2. | ಪ್ರಶಸ್ತಿಗಳು ಮತ್ತು ಸಂಸ್ಕೃತಿ ಶಾಖೆ ವ್ಯವಹಾರಗಳು |
| 3. | ಉತ್ಸವ ಶಾಖೆ | 4. | ಪ್ರಾಯೋಜನೆ ಶಾಖೆ |
| 5. | ಮಾಸಾಶನ | 6. | ಶತಮಾನೋತ್ಸವಗಳು |
| 7. | ರಾಷ್ಟ್ರೀಯ ಕಲಾ ಗ್ಯಾಲರಿ | 8. | ಪ್ರಕಟಣಾ ಶಾಖೆ |
| 9. | ವಿಶೇಷ ಘಟಕ | 10. | ಪ್ರೋತ್ಸಾಹ ಶಾಖೆ (ವೈದ್ಯಕೀಯ ನೆರವು ಸೇರಿದಂತೆ) |
| 11. | ಆಯುಕ್ತರು ವಹಿಸುವ ಇತರೆ ಯಾವುದೇ ವಿಷಯಗಳು | | |

ಮೇಲಿನ ಪ್ರಾಯೋಜಿತ ಕಾರ್ಯಕ್ರಮಗಳಿಗೆ ಸಂಬಂಧಿಸಿದಂತೆ ನಿರ್ದೇಶಕರಿಗೆ ವಹಿಸಿರುವ ಆರ್ಥಿಕ ಮಿತಿ ರೂ.5,000/- ಆಗಿರುತ್ತದೆ.

ನಿರ್ದೇಶಕರ ಆರ್ಥಿಕ ಆಡಳಿತ ವ್ಯಾಪ್ತಿಯು ತಿಂಗಳಿಗೆ ರೂ. 1.00/- ಲಕ್ಷಗಳಿಗೆ ಮೀರತಕ್ಕದ್ದಲ್ಲ.

ರೂ. 5,000/- ಗಳಿಗೆ ಮೇಲ್ಪಟ್ಟ ಎಲ್ಲಾ ಪ್ರಕರಣಗಳು, ಪ್ರಮುಖ ಆರ್ಥಿಕ ವಿಷಯಗಳು, ನೀತಿ ನಿರೂಪಣೆಗೆ ಸಂಬಂಧಪಟ್ಟ ತೀರ್ಮಾನಗಳು ಹಾಗೂ ಇಲಾಖೆಯ ಪ್ರಮುಖ ಕಾರ್ಯಗಳಿಗೆ ಆಯುಕ್ತರ ಆದೇಶ ಪಡೆಯತಕ್ಕದ್ದು.

ನಿರ್ದೇಶಕರಿಗೆ ವಹಿಸಲಾಗಿರುವ ಮೇಲ್ಕಂಡ ಕೆಲಸ ಕಾರ್ಯಗಳನ್ನು ಹೊರತುಪಡಿಸಿ ಇತರೆ ವಿಷಯಗಳಿಗೆ ಸಂಬಂಧಿಸಿದ ಕಡತಗಳನ್ನು ಆಯಾಯ ಜಂಟಿ ನಿರ್ದೇಶಕರು, ಆಯುಕ್ತರಿಗೆ ಮಂಡಿಸಿ, ಆದೇಶ ಪಡೆಯತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ಶಿವರಾಮ್**

ಪಿ.ಆರ್. 1019

ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ ಇಲಾಖೆ,

ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ)

## INFRASTRUCTURE DEVELOPMENT SECRETARIAT

**Sub:** Release of consultancy Services fees to IDeCK for Study on Development of Expressway-Raj Bhavan to Hebbal-reg.

**Read:**
1. Do letter No.IDD 16 UIP 2005 dated:22.11.2005 of Principal Sercretary to Government, Infrastructure Developement Department addressed to the Managing Director, IDek, Bangalore.
2. Letter No. IDeCK/2005/06-813 dated 29.11.2005, addressed to Principal Secretary to Government, Infrastructure Development Department.
3. Government letter No. IDD 16 UIP 2005, dated 8.12.2005 addressed to the M.D., IDeCK, Bangalore.

4. The letter of M.D.and CEO, iDeck in No. iDeck/2005-06/1160 dated:28.2.06 addressed to the principal Secretary to Government, IDD.

**Preamble:-**

1. In the D.O.letter dated:29.10.2005 of Sri Vinay Kumar, Principal Secretary to Government, Infrastucture Development Department read at Sl.No. (1) above, the Managing Director, iDeck was requested to proceed with the first part of the study on the development of elevated expressway-Raj Bhavan to Hebble as decided in the chief Secretary's meeting held on 29.10.2005.

2. In the letter dated: 29.11.2005 of IDeCK read at Sl.No. (2) above, the Managing Director and Chief Executive Officer, iDeCK sought the Government approval for taking up the study at a total revised cost of Rs.4.25 lakhs.

3. The Government in their letter dated 8.12.2005 read at Sl.No.(3) above, confirmed to the proposal of IDeck for taking up the traffic studies for the said project.

4. The Managing Director and CEO, iDeck in his letter No.iDeck/2005-06/1160 dated 28.2.06 read at Sl.No. (4) above has requested for payment of Rs.1,17,087-00 on commission of the project and Rs.2,34,175-00 on submission of a draft traffic report totaling RS.3,51,262 towards the advisory services fees.

5. Government have examined the proposal of iDeck and decided to release Rs.3,51,262/- (Rupees three lakhs fifty one thousands two hundred and sixty two) only being the advisory servces fees for undertaking study on development of elevated expressway from Raj Bhavan to Hebbal, Bangalore.

**Government Order No. IDD 63 NSW 2005, Bangalore, Dated: 30th June 2006, 1st July 2006**

1. After careful examination of the proposal of iDeck, Government are pleased to release Rs.3,51,262/- (Rupees three lakhs fifty one thousand two hundred and sixty two) only and this amount should be utilized for the project studies entrusted to iDeck.

2. This amount would be met out of the available funds under the Head of Account "3451-00-090-1-06-125- Secretariat Economic Services-Infrastructure Preliminary Studies-Modernization (Plan) 2006-07".

3. The Chief Financial Officer (CFO) of iDeck would draw this amount on a payee's receipt duly countersigned by the Under Secretary to Government, Infrastructure Development Department.

4. This order issues in accordance with the powers delegated to the Principal Secretaries to Government by the Finance Department's G.O. No.FD 1 TFP 2003, dated: 12.6.2003.

By Order and in the name of the Governor of Karnataka,

**T.B. RENUKAPRASAD**

P.R. 1020

Under Secretary to Government,
Infrastruture Development Department.

**ಕಾನೂನು ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ**

**ವಿಷಯ:** ಗುಡಿಬಂಡೆ ಕಂದಾಯ ತಾಲ್ಲೂಕಿನ ನೋಟರಿ ನೇಮಿಸುವ ಕುರಿತು.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಲಾ 80 ಎಲ್‌ಸಿಎಲ್ 01 ದಿನಾಂಕ: 11.11.2003.
2. ಸರ್ಕಾರಿ ಆದೇಶ ಸಂಖ್ಯೆ: ಲಾ 194 ಎಲ್‌ಸಿಎಲ್ 05 ದಿನಾಂಕ: 11.08.2005.
3. ಪತ್ರ ಸಂಖ್ಯೆ:ಎಂ.ಟಿ.ನಂ.9115/2005 ದಿನಾಂಕ: 30.9.2005.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಆದೇಶದಲ್ಲಿ ಶ್ರೀಮತಿ ಷಹತಾಜ್, ನೋಟರಿ, ಗುಡಿಬಂಡೆ ಇವರನ್ನು ನೋಟರಿ ವೃತ್ತಿಯಿಂದ ತೆಗೆದುಹಾಕಲಾಗಿತ್ತು. ನಂತರ ಸದರಿ ಹುದ್ದೆಯನ್ನು ಬೇರೆಯವರಿಂದ ತುಂಬುವ ಕುರಿತಂತೆ ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ನೋಟರಿ ನಿಯಮಗಳನ್ವಯ ಕ್ರಮಕೈಗೊಂಡು ಪ್ರಸ್ತಾವನೆ ಸಲ್ಲಿಸುವಂತೆ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಕೋಲಾರ ಇವರನ್ನು ಕೋರಲಾಗಿತ್ತು. ಆ ಮೇರೆಗೆ ಮೇಲೆ (3) ರಲ್ಲಿ ಓದಲಾದ ಪತ್ರದಲ್ಲಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಅದನ್ನು ಪರಿಶೀಲಿಸಿ ಸರ್ಕಾರ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂ. ಲಾ 194 ಎಲ್‌ಸಿಎಲ್ 2005, ಬೆಂಗಳೂರು, ದಿನಾಂಕ: 24ನೇ ಜೂನ್ 2006**

ನೋಟರಿ ನಿಯಮಗಳ (1956) ನಿಯಮ 8(1)ರಲ್ಲಿ ಪ್ರದತ್ತವಾಗಿರುವ ಅಧಿಕಾರ ಚಲಾಯಿಸಿ, ನೋಟರಿ ಅಧಿನಿಯಮ (1952) ಹಾಗೂ ಉಲ್ಲೇಖಿತ ನಿಯಮಗಳ ರೀತ್ಯ ಶ್ರೀ ಎ. ರಾಮನಾಥ ರೆಡ್ಡಿ ವಕೀಲರು, ನಂ.1394, ಮುಖ್ಯರಸ್ತೆ, ಗುಡಿಬಂಡೆ ಟೌನ್, ಕೋಲಾರ ಜಿಲ್ಲೆ ಇವರನ್ನು ವೃತ್ತಿ ಪ್ರಮಾಣದ ಪತ್ರ ನೀಡಲಾದ ದಿನಾಂಕದಿಂದ ಐದು ವರ್ಷಗಳ ಅವಧಿಗೆ ಗುಡಿಬಂಡೆ ಕಂದಾಯ ತಾಲ್ಲೂಕಿನ ನೋಟರಿಯನ್ನಾಗಿ ನೇಮಿಸಿದೆ.

ಸದರಿ ವಕೀಲರು ಲೆಕ್ಕ ಶೀರ್ಷಿಕೆ 0070-ಇತರೆ ಆಡಳಿತಾತ್ಮಕ ಸೇವೆಗಳು-01-ನ್ಯಾಯ ಪರಿಪಾಲನೆ-501-0-ಇತರೆ ಸ್ವೀಕೃತಿಗಳು-06 ಇತರೆ ಬಾಬ್ತುಗಳಿಗೆ (0070-01-501-0-06) ನಿಗದಿಪಡಿಸಲಾದ ರೂ.1000 (ರೂ.ಒಂದು ಸಾವಿರಗಳು ಮಾತ್ರ) ಶುಲ್ಕವನ್ನು ಸರ್ಕಾರಿ ಖಜಾನೆ ಜಮಾ ಮಾಡಿ ಆ ಬಗೆಗಿನ ಮೂಲ ಚಲನ್ ಮತ್ತು ಹುಟ್ಟಿದ ದಿನಾಂಕವನ್ನು ದೃಢೀಕರಿಸಬಲ್ಲ ದಾಖಲೆಯನ್ನು ಹಾಜರುಪಡಿಸಿದ ನಂತರ ಸದರಿಯವರಿಗೆ ವೃತ್ತಿಪ್ರಮಾಣ ಪತ್ರ ನೀಡಲಾಗುವುದು.

ತದನಂತರ ಶ್ರೀಯುತರ ಹೆಸರನ್ನು ನೋಟರಿ ಅಧಿನಿಯಮ (1952)ರ ಕಲಂ 4ರ ಅಡಿ ಸರ್ಕಾರ ನಿರ್ವಹಿಸುತ್ತಿರುವ ರಿಜಿಸ್ಟರ್‌ನಲ್ಲಿ ನಮೂದಿಸಲಾಗುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಶಕುಂತಲ ಹೆಚ್.ಆರ್.**

ಪಿ.ಆರ್. 1021

ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ-2),

ಕಾನೂನು ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ.

**ವಿಷಯ:** ಕೊಪ್ಪಳ ತಾಲ್ಲೂಕಿಗೆ ನೋಟರಿಗಳನ್ನು ನೇಮಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಲಾ 209 ಎಲ್‌ಸಿಎಲ್ 2005 ದಿನಾಂಕ: 24.12.2005.
2. ಸರ್ಕಾರಿ ಆದೇಶ ಸಂಖ್ಯೆ: ಲಾ 209 ಎಲ್‌ಸಿಎಲ್ 2005 ದಿನಾಂಕ: 31.12.2005.
3. ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಕೊಪ್ಪಳ ಇವರ ಪತ್ರ ಸಂಖ್ಯೆ:725/ಆಡಳಿತ/2006 ದಿನಾಂಕ: 23.3.2006.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಕೊಪ್ಪಳ ಜಿಲ್ಲೆ ಕೊಪ್ಪಳ ಕಂದಾಯ ತಾಲ್ಲೂಕಿಗೆ ಎರಡು ನೋಟರಿ ಹುದ್ದೆಗಳನ್ನು ಹೆಚ್ಚುವರಿಯಾಗಿ ಸೃಜಿಸಲಾಗಿತ್ತು. ನಂತರ ಮೇಲೆ (2)ರಲ್ಲಿ ಓದಲಾದ ಸರ್ಕಾರಿ ಪತ್ರದಲ್ಲಿ ಸದರಿ ಹುದ್ದೆಗಳಿಗೆ ಅರ್ಹ ವಕೀಲರನ್ನು ನೇಮಕಾತಿ ಮಾಡುವ ಸಲುವಾಗಿ ನಿಯಮಗಳನ್ವಯ ಕ್ರಮಕೈಗೊಂಡು ಪ್ರಸ್ತಾವನೆ ಸಲ್ಲಿಸುವಂತೆ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಕೊಪ್ಪಳ ಇವರನ್ನು ಕೋರಲಾಗಿತ್ತು.

ಆ ಮೇರೆಗೆ ಮೇಲೆ (3) ರಲ್ಲಿ ಓದಲಾದ ಪತ್ರದಲ್ಲಿ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಕೊಪ್ಪಳ ಇವರು ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಸದರಿ ಪ್ರಸ್ತಾವನೆ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ. ಲಾ 211 ಎಲ್‌ಸಿಎಲ್ 2005, ಬೆಂಗಳೂರು, ದಿನಾಂಕ: 25ನೇ ಜೂನ್ 2006**

ನೋಟರಿ ನಿಯಮಗಳ (1956) ನಿಯಮ 8(1)ರಲ್ಲಿ ಪ್ರದತ್ತವಾಗಿರುವ ಅಧಿಕಾರ ಚಲಾಯಿಸಿ ನೋಟರಿ ಅಧಿನಿಯಮ (1952) ಹಾಗೂ ಉಲ್ಲೇಖಿತ ನಿಯಮಗಳ ರೀತ್ಯ ಈ ಕೆಳಗಿನವರನ್ನು ವೃತ್ತಿ ಪ್ರಮಾಣ ಪತ್ರ ನೀಡುವ ದಿನಾಂಕದಿಂದ ಐದು ವರ್ಷಗಳ ಅವಧಿಗೆ ಕೊಪ್ಪಳ ಕಂದಾಯ ತಾಲ್ಲೂಕಿನ ನೋಟರಿಗಳನ್ನಾಗಿ ನೇಮಿಸಲಾಗಿದೆ.

- ಶ್ರೀ ಚೌದಾಯಿ ಅಬ್ದುಲ್ ಅಜೀಜ್, ಬಿ.ಡಿ.ನಗರ, ಕುಷ್ಟಗಿ ರಸ್ತೆ, ಕೊಪ್ಪಳ.
- ಶ್ರೀ ವೀರಭದ್ರಗೌಡ ಶೇಖರಗೌಡ ಕಟ್ಟಿ, ಕಾಳಿದಾಸನಗರ, ಕುಷ್ಟಗಿ ರಸ್ತೆ, ಕೊಪ್ಪಳ.

ಸದರಿ ವಕೀಲರುಗಳು ಲೆಕ್ಕ ಶೀರ್ಷಿಕೆ 0070-ಇತರೆ ಆಡಳಿತಾತ್ಮಕ ಸೇವೆಗಳು-01-ನ್ಯಾಯ ಪರಿಪಾಲನೆ-501-0-ಇತರೆ ಸ್ವೀಕೃತಿಗಳು-06 ಇತರೆ ಬಾಬ್ತುಗಳಿಗೆ (0070-01-501-0-06) ಸರ್ಕಾರಿ ಖಜಾನೆಗೆ ನಿಗದಿಪಡಿಸಲಾದ ರೂ.1000 (ಒಂದು ಸಾವಿಗಳು ಮಾತ್ರ) ಶುಲ್ಕವನ್ನು ಜಮಾ ಮಾಡಿ ಆ ಬಗೆಗಿನ ಮೂಲ ಚಲನ್ ಮತ್ತು ಹುಟ್ಟಿದ ದಿನಾಂಕವನ್ನು ದೃಢೀಕರಿಸಬಲ್ಲ ದಾಖಲೆಯನ್ನು ಹಾಜರುಪಡಿಸಿದ ನಂತರ ಸದರಿಯವರಿಗೆ ವೃತ್ತಿಪ್ರಮಾಣ ಪತ್ರ ನೀಡಲಾಗುವುದು.

ತದನಂತರ ಶ್ರೀಯುತರ ಹೆಸರನ್ನು ನೋಟರಿ ಅಧಿನಿಯಮ (1952)ರ ಕಲಂ 4ರ ಅಡಿ ಸರ್ಕಾರ ನಿರ್ವಹಿಸುತ್ತಿರುವ ರಿಜಿಸ್ಟರ್‌ನಲ್ಲಿ ನಮೂದಿಸಲಾಗುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಶಕುಂತಲ ಹೆಚ್.ಆರ್.**

ಪಿ.ಆರ್. 1022

ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ-2),

ಕಾನೂನು ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ.

## INFRASTRUCTURE DEVELOPMENT SECRETARIAT

**Sub:** Release of funds for urgent repairs and maintenance of removal of rain water work near RUB-Ekkumbi and Molakalmur District Haveri Town-reg.

**Read:**
1. Proceedings of the Steering Committee for construction of ROB RUB's in Karnataka held under the Chairmanship of Principal Secretary to Government, IDD n 13.3.06.
2. Government letter of even No.dated 24.4.06.
3. The letter of the Additional Divisional Manager, Mysore, South Western Railways No. Y/W.352/RUB (a) Haveri, dated 5.5.06.
4. Informal meeting held under the Chairmanship of Hon'ble Minister for Rural Development and Panchayat Raj, dated 19.5.05.
5. Proposal of Executive Engineer, PWD, Haveri, dated 23.5.06.

**Preamble:-**

1. The Steering Committee for construction of ROB/RUB in Karnataka, in its meeting held on 13.3.06 discussed the matter at length and decided that Infrastructure Development Department to take up the matter with Divisional Railway Manager, South Western Railway, Mysore.
2. Government in their letter dated 24.4.06 read at Sl.No.(2) above, requested DRM, Mysore to take up the drainage work as maintenance work near Haveri, Railway Station. The South Wetern Railway, Mysre Division inturn clarified that sinces drainage is constructed with Roadway of the Bridge and work connected with it should be duly concerned Road Authority i.e., Municipalty Haveti.

3. In the informal meeting held under the Chairmanship of Hon'ble Minister of Rural Development & Panchayat Raj on 18.5.06, keeping in view the ensuing rainy season in mind, it was decided that Public Works Department should take up the works of repairs and removal of rain water immediately at a cost of Rs.15 lakhs. (Rupees fifteen lakhs) only.
4. The Executive Engineer, Public Works Department. Haveri in his letter No. ಕಾಸಿಇಂ/ಲೋಇವಿ/ವಿಬಿ/ರಾಹೆ/2006-07/396 dated 23.5.06, submitted an estimate for Rs.15 lakhs for taking up repairs and removal of rain water at a cost of Rs.15 lakhs.
5. Government have decided to release Rs. 15 lakhs for taking up repairs and removal of rain water work near Haveri Town RUB Monakalmur Haveri District. Hence the following order.

**Government Order No. IDD 11 NSW 2004, Bangalore, Dated: 3rd July 2006**

1. After careful examination of the proposal of the Executive Engineer, Public Works Department. Haveri, Government are pleased to release Rs. 15 lakhs (Rupees fifteen lakhs) only for taking up the repairs and removal of Rain water works near RUB-Ekkumbi Molakalmlur, at LC No.43-A. Haveri District.
2. This amount shall be met under the Head of account 5465-01-190-3-04 K-RIDE-ROB/RUB projects 211-Investment (Plan), 2006-07.
3. The Chief Financial Officer, iDeCK would draw this amount on a payee's receipt duly countersigned by the Under Secretary to Government, Infratructure Development Department and disburse the same to Executive Engineer. Public Works Department. Haveri after obtaining one Receipt immediately.
4. This order issues under the delegated financial powers to the Principal Secretaries of the Administrative Departments of Government vide Government order No.FD 1 TFP 2003 dated 12.6.03.

By Order and in the name of the Governor of Karnataka,

**T.B. RENUKA PRASAD**

P.R. 1023

Under Secretary to Government,
Infrastructure Development Department.

**ಕಂದಾಯ ಸಚಿವಾಲಯ**

**ವಿಷಯ:** ಶ್ರೀ ಲಾಲಸಿಂಗ್ ನಾಯಕ್, ಹಿಂದಿನ ತಹಶೀಲ್ದಾರ್, ಯಲ್ಬುರ್ಗಾ ತಾಲ್ಲೂಕು ಕೊಪ್ಪಳ ಜಿಲ್ಲೆ, ಪ್ರಸ್ತುತ ಅಮಾನತ್ತಿನಲ್ಲಿ ಇವರ ವಿರುದ್ಧ ಇಲಾಖಾ ವಿಚಾರಣೆ ಜರುಗಿಸಿ-ದಂಡನೆ ವಿಧಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ:ಆರ್.ಡಿ.23.ಎಡಿಇ:2003, ದಿನಾಂಕ:16.9.2004.
2. ಶ್ರೀ ಟಿ.ಜಿ. ಮರಿಯಪ್ಪ, ವಿಚಾರಣಾಧಿಕಾರಿಗಳು ಇವರ ವಿಚಾರಣಾ ವರದಿ ದಿ:31.8.2005.
3. ಕೊಪ್ಪಳ ಜಿಲ್ಲಾಧಿಕಾರಿಗಳ ವರದಿ ದಿನಾಂಕ 20.2.2006.

**ಪ್ರಸ್ತಾವನೆ:**

ಶ್ರೀ ಲಾಲ್‌ಸಿಂಗ್ ನಾಯಕ್, ಹಿಂದಿನ ತಹಶೀಲ್ದಾರ್ ಯಲ್ಬುರ್ಗಾ ತಾಲ್ಲೂಕು ಕೊಪ್ಪಳ ಜಿಲ್ಲೆ ಇವರು ಸದರಿ ತಾಲ್ಲೂಕಿನಲ್ಲಿ ಈ ಹಿಂದೆ ಕಾರ್ಯನಿರ್ವಹಿಸುತ್ತಿದ್ದಾಗ ಮೇಲಾಧಿಕಾರಿಗಳ ಆದೇಶವನ್ನು ಲೆಕ್ಕಿಸದೆ ಅನಧಿಕೃತವಾಗಿ ಗೈರು ಹಾಜರಾಗಿರುತ್ತಾರೆ ಹಾಗೂ ಬರ ಪರಿಹಾರ ಕಾರ್ಯಗಳ ಪರಿಣಾಮಕಾರಿ ಅನುಷ್ಠಾನ ಮತ್ತು ಸೂಕ್ತ ಮೇಲ್ವಿಚಾರಣೆ ಬಗ್ಗೆ ಸರ್ಕಾರದ ಸುತ್ತೋಲೆ ಸಂಖ್ಯೆ:1:ಬಪ:2003, ದಿನಾಂಕ:30.1.2003ರಲ್ಲಿ ತಿಳಿಸಿರುವ ಮಾರ್ಗಸೂಚಿಗಳನ್ನು ಉಲ್ಲಂಘಿಸಿ ಹಾಗೂ ಇನ್ನಿತರ ಕರ್ತವ್ಯ ಲೋಪಗಳನ್ನು ಎಸಗಿರುತ್ತಾರೆಂದು, ಅದರಿಂದಾಗಿ ಸದರಿ ಅಧಿಕಾರಿಯವರ ವಿರುದ್ಧ ಇಲಾಖಾ ವಿಚಾರಣೆ ಜರುಗಿಸುವಂತೆ ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ದಿ:16.9.2004ರ ಸರ್ಕಾರಿ ಆದೇಶದಲ್ಲಿ ಸರ್ಕಾರವು ನಿವೃತ್ತ ಜಿಲ್ಲಾ ಮತ್ತು ಸೆಕ್ಷನ್ ನ್ಯಾಯಾಧೀಶರಾದ ಶ್ರೀ ಟಿ.ಜಿ. ಮರಿಯಪ್ಪ ಇವರನ್ನು ವಿಚಾರಣಾಧಿಕಾರಿಗಳಾಗಿ ನೇಮಿಸಲಾಗಿತ್ತು.

ವಿಚಾರಣಾಧಿಕಾರಿಗಳು ಈ ಇಲಾಖಾ ವಿಚಾರಣೆಯನ್ನು ಜರುಗಿಸಿ ಮೇಲೆ ಕ್ರಮ ಸಂಖ್ಯೆ(2)ರಲ್ಲಿ ಓದಲಾದ ದಿನಾಂಕ:31.8.2005ರಲ್ಲಿ ತಮ್ಮ ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಕಳುಹಿಸಿರುತ್ತಾರೆ. ವಿಚಾರಣಾಧಿಕಾರಿಗಳು, ಈ ವಿಚಾರಣಾ ವರದಿಯಲ್ಲಿ ಆರೋಪಿತ ಸರ್ಕಾರಿ ಅಧಿಕಾರಿಗಳ ಮೇಲೆ ಹೊರಿಸಿರುವ ಯಾವುದೇ ಒಂದು ಆರೋಪವು ರುಜುವಾತು ಮಾಡಲ್ಪಟ್ಟಿಲ್ಲವೆಂದು ತಿಳಿಸಿರುತ್ತಾರೆ.

ಜಿಲ್ಲಾಧಿಕಾರಿಗಳು ಕೊಪ್ಪಳ ಇವರಿಂದ ಕ್ರಮ ಸಂಖ್ಯೆ:3ರಲ್ಲಿ ಓದಲಾದ ವರದಿಯನ್ನು ತರಿಸಲಾಗಿದ್ದು, ಸದರಿ ವರದಿಯಲ್ಲಿ ಶ್ರೀ ಲಾಲಸಿಂಗ್ ನಾಯಕ್ ಹಿಂದಿನ ತಹಶೀಲ್ದಾರ್ ಯಲ್ಬುರ್ಗಾ ರವರು ಕರ್ತವ್ಯಲೋಪ ಎಸಗಿರುವುದು ಕಂಡು ಬಂದಿರುವುದರಿಂದ ಸಾಮಾನ್ಯ ಶಿಕ್ಷೆ ವಿಧಿಸಿ ಪ್ರಕರಣ ಮುಕ್ತಾಯಗೊಳಿಸಬಹುದೆಂದು ತಿಳಿಸಿದ್ದಾರೆ.

**ಸರ್ಕಾರದ ಆದೇಶ ಸಂಖ್ಯೆ: ಆರ್.ಡಿ.23.ಎಡಿಇ:2003, ಬೆಂಗಳೂರು, ದಿನಾಂಕ: 28ನೇ ಜೂನ್ 2006**

ಪ್ರಸ್ತಾವನೆಯಲ್ಲಿ ಕೂಲಂಕಷವಾಗಿ ಪರಿಶೀಲಿಸಿರುವ ಹಿನ್ನಲೆಯಲ್ಲಿ ಶ್ರೀ ಲಾಲ್‌ಸಿಂಗ್ ನಾಯಕ್ ಅವರನ್ನು ದಿನಾಂಕ:16.9.2004ರ ನೋಟೀಸಿನಲ್ಲಿ ಮಾಡಲಾದ ಆರೋಪದಿಂದ ಆರೋಪ ಮುಕ್ತರನ್ನಾಗಿಸಿದೆ ಹಾಗೂ ಇನ್ನು ಮುಂದೆ ಈ ರೀತಿಯ ಪ್ರಸಂಗಗಳಿಗೆ ಅವಕಾಶ ಉಂಟಾಗದಂತೆ ಜಾಗ್ರತೆ ವಹಿಸಲು ಈ ಮೂಲಕ ಎಚ್ಚರಿಕೆ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ಶ್ರೀಮತಿ ಚಂದ್ರಶೇಖರ**

ಪಿ.ಆರ್. 1024

ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಸೇವೆಗಳು-3)

**ವಿಷಯ:** ಶ್ರೀ ಹೆಚ್. ಹನುಮಂತಯ್ಯ, ಹಿಂದಿನ ತಹಶೀಲ್ದಾರ್ ಮತ್ತಿತರರ ವಿರುದ್ಧ ಜಂಟಿ ಇಲಾಖಾ ವಿಚಾರಣೆ, ಶ್ರೀ ಕೆ. ಭೀಮರಾವ್ ತಹಶೀಲ್ದಾರ್ ಹಾಗೂ ಶ್ರೀ ಗಂಗು ಶಿರಸ್ತೇದಾರರವರಿಗೆ ದಂಡನೆ ವಿಧಿಸಿ ಆದೇಶ ಹೊರಡಿಸುವ ಕುರಿತು.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ:ಆರ್.ಡಿ.44.ಎ.ಡಿ.ಇ:96, ದಿನಾಂಕ:20.10.99.
2. ಸರ್ಕಾರಿ ಆದೇಶ ಸಂಖ್ಯೆ:ಆರ್.ಡಿ.44.ಎ.ಡಿ.ಇ:96, ದಿನಾಂಕ:17.7.2000.
3. ಹಿಂದಿನ ಗುಲ್ಬರ್ಗಾ ಜಿಲ್ಲಾಧಿಕಾರಿಗಳು ಹಾಗೂ ವಿಚಾರಣಾಧಿಕಾರಿ ರವರ ದಿನಾಂಕ:8.7.2004ರ ವಿಚಾರಣಾ ವರದಿ.
4. ದಿನಾಂಕ:29.3.2005ರ 2ನೇ ಕಾರಣ ಕೇಳುವ ನೋಟೀಸ್ ಸಂಖ್ಯೆ:ಆರ್.ಡಿ.44.ಎಡಿಇ:96(1)
5. ದಿನಾಂಕ:18.6.2005ರ 2ನೇ ಕಾರಣ ಕೇಳುವ ನೋಟೀಸ್ ಸಂಖ್ಯೆ:ಆರ್.ಡಿ.44.ಎಡಿಇ:96(2)
6. ಶ್ರೀ ಕೆ. ಭೀಮರಾವ್ ಮತ್ತು ಶ್ರೀ ಗಂಗೂ ಇವರು 2ನೇ ಕಾರಣ ಕೇಳುವ ನೋಟೀಸ್‌ಗೆ ಕ್ರಮವಾಗಿ ದಿ:13.4.2005 ಮತ್ತು ದಿ:21.7.05 ರಂದು ನೀಡಿರುವ ಲಿಖಿತ ಸಮಜಾಯಿಷಿ.

**ಪ್ರಸ್ತಾವನೆ:**

ಬೀದರ್ ಜಿಲ್ಲೆಯಲ್ಲಿ ಪ್ರಾಥಮಿಕ ಶಾಲಾ ಶಿಕ್ಷಕರ ನೇಮಕಾತಿಗಾಗಿ ನೇಮಕಾತಿ ಬಯಸಿ ಅರ್ಜಿ ಸಲ್ಲಿಸಿದ್ದ ಅಭ್ಯರ್ಥಿಗಳಿಗೆ ಸುಳ್ಳು ಆದಾಯ ಪತ್ರ ನೀಡಿ ಕರ್ತವ್ಯ ಲೋಪ ವೆಸಗಿದ್ದಾರೆನ್ನಲಾದ ಅಂದು ಕಾರ್ಯನಿರ್ವಹಿಸುತ್ತಿದ್ದ ಶ್ರೀ ಕೆ. ಬೀಮರಾವ್, ಹಿಂದಿನ ತಹಶೀಲ್ದಾರ್ ಬೀದರ್ ಶ್ರೀ ಗಂಗು ಹಿಂದಿನ ಉಪ ತಹಶೀಲ್ದಾರ್‌ರು ನಾಡ ಕಛೇರಿ ಕಮಲನಗರ ಹಾಗೂ ಇತರ ಅಧಿಕಾರಿ/ನೌಕರರುಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆ ಜರುಗಿಸಲು ಮೇಲೆ ಕ್ರ.ಸಂ (1)ರ ದಿನಾಂಕ:20.10.99ರ ಆದೇಶದಲ್ಲಿ ಶ್ರೀ ಎಸ್.ಬಿ. ತುಂಬದ್ ನಿವೃತ್ತ ಜಿಲ್ಲಾ ಮತ್ತು ಸೆಷನ್ ನ್ಯಾಯಾಧೀಶರನ್ನು ವಿಚಾರಣಾಧಿಕಾರಿಗಳನ್ನಾಗಿ ನೇಮಕ ಮಾಡಲಾಗಿತ್ತು. ನಂತರ ವಿಚಾರಣಾಧಿಕಾರಿಗಳನ್ನು ಬದಲಾಯಿಸಿ ಮೇಲೆ ಓದಲಾದ ಕ್ರ.ಸಂ(2)ರ ದಿ:17.7.2000ರ ಆದೇಶದಲ್ಲಿ ಜಿಲ್ಲಾಧಿಕಾರಿಗಳು ಗುಲ್ಬರ್ಗಾ ಜಿಲ್ಲೆ ಇವರನ್ನು ವಿಚಾರಣಾಧಿಕಾರಿಗಳನ್ನಾಗಿ ನೇಮಿಸಲಾಗಿತ್ತು.

ಸದರಿ ಆದೇಶದನ್ವಯ ಈ ಪ್ರಕರಣದಲ್ಲಿ ಜಂಟಿ ಇಲಾಖಾ ವಿಚಾರಣೆ ನಡೆಸಿದ ವಿಚಾರಣಾಧಿಕಾರಿಯವರು ಮೇಲೆ ಓದಲಾದ ಕ್ರ.ಸಂ.(3)ರಲ್ಲಿ ದಿ:8.7.2004ರ ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ. ಸದರಿ ವಿಚಾರಣಾ ವರದಿಯಲ್ಲಿ ವಿಚಾರಣಾಧಿಕಾರಿಗಳು ಮೇಲ್ಕಂಡ ಆರೋಪಿ ಅಧಿಕಾರಿ/ನೌಕರರ ವಿರುದ್ಧ ಆರೋಪಗಳು ಸಾಬೀತಾಗಿರುವುದಿಲ್ಲವೆಂದು ವರದಿ ಮಾಡಿರುತ್ತಾರೆ. ವಿಚಾರಣಾಧಿಕಾರಿಗಳು ನೀಡಿರುವ ವರದಿಯು ಸಮಂಜಸವಾಗಿರುವ ಕಾರಣ ವಿಚಾರಣಾಧಿಕಾರಿಗಳ ವರದಿಯನ್ನು ಒಪ್ಪದೆ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 8ರನ್ವಯ ಸೂಕ್ತ ದಂಡನೆಯನ್ನು ವಿಧಿಸುವ ಬಗ್ಗೆ ಪ್ರಸ್ತಾಪಿಸಿ ಮೇಲೆ ಕ್ರ.ಸಂ (4) ಮತ್ತು (5)ರಲ್ಲಿ ಓದಲಾದ ದಿನಾಂಕ: 29.3.2005 ಮತ್ತು 18.6.2005ರ ಎರಡನೇ ಕಾರಣ ಕೇಳುವ ನೋಟೀಸನ್ನು ಕ್ರಮವಾಗಿ ಶ್ರೀ ಕೆ. ಭೀಮರಾವ್ ಮತ್ತು ಶ್ರೀ ಗಂಗು ರವರಿಗೆ ಜಾರಿಗೊಳಿಸಲಾಗಿತ್ತು. ಇದಕ್ಕೆ ಉತ್ತರವಾಗಿ ಕ್ರ.ಸಂ (6)ರಲ್ಲಿ ಓದಲಾದ ದಿನಾಂಕ:13.4.2005 ಮತ್ತು 21.7.2005ರಲ್ಲಿ ಕ್ರಮಾಗಿ ಶ್ರೀ ಕೆ ಭೀಮರಾವ್ ಮತ್ತು ಶ್ರೀ ಗಂಗು ರವರುಗಳು ತಮ್ಮ ಲಿಖಿತ ಉತ್ತರಗಳನ್ನು ಸರ್ಕಾರಕ್ಕೆ ಸಲ್ಲಿಸಿ ಪ್ರಸ್ತಾಪಿತ ದಂಡನೆ ವಿಧಿಸುವುದನ್ನು ಕೈಬಿಡಲು ಕೋರಿರುತ್ತಾರೆ.

ಈ ಪ್ರಕರಣದಲ್ಲಿ ವಿಚಾರಣಾ ವರದಿ ಆರೋಪಿ ಅಧಿಕಾರಿ/ನೌಕರರು ಸಲ್ಲಿಸಿರುವ ಲಿಖಿತ ಉತ್ತರ ಅವುಗಳನ್ನು ದಾಖಲೆಗಳ ಆಧಾರದ ಮೇಲೆ ಪರಿಶೀಲಿಸಲಾಗಿ ಈ ಮೇಲ್ಕಂಡ ಅಧಿಕಾರಿ/ನೌಕರರು ಕರ್ತವ್ಯ ಚ್ಯುತಿ ಎಸಗಿರುವುದನ್ನು ಪರಿಗಣಿಸಿ ಸೂಕ್ತ ದಂಡನೆಯನ್ನು ವಿಧಿಸಲು ಸರ್ಕಾರವು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆರ್.ಡಿ. 44 ಎ.ಡಿ.ಇ. 96, ಬೆಂಗಳೂರು, ದಿನಾಂಕ: 29ನೇ ಜೂನ್ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು ನಿಯಮ 8(iii) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಈ ಕೆಳಕಂಡ ಆರೋಪಿತರಿಗೆ ಅವರ ಹೆಸರಿನ ಮುಂದೆ ಸೂಚಿಸಿರುವ ದಂಡನೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ವಿಧಿಸಿ ಆದೇಶಿಸಿದೆ.

| | | |
|---|---|---|
| 1) | ಶ್ರೀ ಕೆ. ಬೀಮರಾವ್<br>ಹಿಂದಿನ ತಹಶೀಲ್ದಾರ್, ಬೀದರ್ ತಾಲ್ಲೂಕು ಪ್ರಸ್ತುತ ತಹಶೀಲ್ದಾರ್, ಹಾನಗಲ್ ತಾಲ್ಲೂಕು | ಎರಡು ವಾರ್ಷಿಕ ವೇತನ ಬಡ್ತಿಗಳನ್ನು ಸಂಚಿತ ಪರಿಣಾಮವಾಗಿ ತಡೆಹಿಡಿದು ಆದೇಶಿಸಿದೆ. |
| 2) | ಶ್ರೀ ಗಂಗು<br>ಹಿಂದಿನ ಉಪ ತಹಶೀಲ್ದಾರ್ ನಾಡ ಕಛೇರಿ, ಕಮಲನಗರ. | ಎರಡು ವಾರ್ಷಿಕ ವೇತನ ಬಡ್ತಿಗಳನ್ನು ಸಂಚಿತ ಪರಿಣಾಮವಾಗಿ ತಡೆಹಿಡಿದು ಆದೇಶಿಸಿದೆ. |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ಶ್ರೀಮತಿ ಚಂದ್ರಶೇಖರ**

ಪಿ.ಆರ್. 1025

ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಸೇವೆಗಳು-3)

**ವಿಷಯ:** ಇನಾಂ ರದ್ದಿಯಾತಿ ಕಾಯ್ದೆಯನ್ವಯ ಧಾರ್ಮಿಕ ಸಂಸ್ಥೆಗಳಿಗೆ ನಿಗದಿಪಡಿಸಿರುವ ತಸ್ತೀಕ್ ಮೊತ್ತವನ್ನು ಹೆಚ್ಚಿಸುವ ಕುರಿತು.

**ಓದಲಾಗಿದೆ:**
1. ಧಾರ್ಮಿಕ ದತ್ತಿ ಆಯುಕ್ತರವರ ಪತ್ರ ಸಂಖ್ಯೆ:ಎಡಿಎಂ/2/2ಐಎನ್ಎ/21/2003-04, ದಿನಾಂಕ:26.4.2006.
2. ಕಾರ್ಯದರ್ಶಿ, ಕಂದಾಯ ಇಲಾಖೆಯವರ ಅಧ್ಯಕ್ಷತೆಯಲ್ಲಿ ದಿನಾಂಕ:3.5.2006 ರಂದು ನಡೆದ ಸಭಾ ನಡವಳಿ.
3. ದಿನಾಂಕ:16.6.2006ರ ಸರ್ಕಾರಿ ಆದೇಶ ಸಂಖ್ಯೆ:ಕಂಇ3ಮುತಬ2006.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ:1ರಲ್ಲಿ ಓದಲಾದ ಧಾರ್ಮಿಕ ದತ್ತಿ ಆಯುಕ್ತರವರ ಪತ್ರ ದಿನಾಂಕ:26.4.2006ರಲ್ಲಿ ಕರ್ನಾಟಕ ಇನಾಂ ರದ್ದಿಯಾತಿ ಕಾಯ್ದೆ 1955 ಮತ್ತು ಕರ್ನಾಟಕ ಹಲವು ಇನಾಂ ರದ್ದಿಯಾತಿ ಕಾಯ್ದೆ 1977ರನ್ವಯ ಧಾರ್ಮಿಕ ಸಂಸ್ಥೆಗಳು ಹೊಂದಿದ್ದ ಇನಾಂ ಜಮೀನುಗಳು ಸರ್ಕಾರಕ್ಕೆ ವಿಹಿತವಾಗಿದ್ದರಿಂದ, ಇದಕ್ಕೆ ಪರಿಹಾರಾರ್ಥವಾಗಿ ತಸ್ತೀಕ್ ಭತ್ಯೆ ನಿಗದಿಪಡಿಸಿ, ಸಂಸ್ಥೆಗಳು ಅಸ್ತಿತ್ವದಲ್ಲಿರುವವರೆಗೆ ಪಾವತಿಸಬೇಕಾಗಿರುತ್ತದೆ. ಸದರಿ

ಕಾಯ್ದೆಗಳನ್ವಯ ಹಲವಾರು ಸಂಸ್ಥೆಗಳು ನಿಗದಿಪಡಿಸಿರುವ ತಸ್ತೀಕ್ ಮೊತ್ತವು ಅತೀ ಕಡಿಮೆಯಾಗಿದ್ದು, ದೇವಾಲಯದ ದೈನಂದಿನ ಪೂಜಾ ಕೈಂಕರ್ಯಗಳನ್ನು ನಡೆಸಲು ಕಷ್ಟಸಾಧ್ಯವಾಗಿರುವುದರಿಂದ ವಾರ್ಷಿಕ ರೂ.5999/-ಗಳಿಗಿಂತ ಕಡಿಮೆ ತಸ್ತೀಕ್ ನಿಗದಿಯಾಗಿರುವಂತಹ ಸಂಸ್ಥೆಗಳಿಗೆ ರೂ.6000/-ಗಳಿಗೆ ಹೆಚ್ಚಿಸಿ, ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

ಸರ್ಕಾರವು 2006-07ನೇ ಸಾಲಿನ ಆಯವ್ಯಯದಲ್ಲಿ ತಸ್ತೀಕ್ ಪಾವತಿಗಾಗಿ ರೂ.2124.48 ಲಕ್ಷಗಳನ್ನು ಒದಗಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ:(2)ರ ದಿನಾಂಕ:3.5.2006ರಂದು ನಡೆದ ಸಭೆಯ ನಡವಳಿಯಂತೆ ರಾಜ್ಯದಲ್ಲಿ ಧಾರ್ಮಿಕ ಮತ್ತು ಧರ್ಮಾದಾಯ ಸಂಸ್ಥೆಗಳ ವಾರ್ಷಿಕ ತಸ್ತೀಕ್ ಮೊತ್ತ ರೂ.5,999/-ಗಳಿಗಿಂತ ಕಡಿಮೆ ಇರುವ ಸಂಸ್ಥೆಗಳಿಗೆ 2006-07ನೇ ಸಾಲಿನ ವರ್ಷದಿಂದ ವಾರ್ಷಿಕವಾಗಿ ರೂ.6000/-ಗಳಿಗೆ ಹೆಚ್ಚಿಸಿ ಆದೇಶ ಹೊರಡಿಸಲು ಅನುಕೂಲವಾಗುವಂತೆ ಧಾರ್ಮಿಕ ದತ್ತಿ ಆಯುಕ್ತರು ಅಂತಹ ಸಂಸ್ಥೆಯನ್ನು ಗುರುತಿಸಿ ಸರ್ಕಾರಕ್ಕೆ ಸಲ್ಲಿಸುವಂತೆ ತೀರ್ಮಾನಿಸಲಾಗಿತ್ತು. ಆ ರೀತಿ ಆಯುಕ್ತರಿಂದ ಸ್ವೀಕರಿಸಿದ ದಿನಾಂಕ:22.6.2006ರ ಪಟ್ಟಿಯ ಆಧಾರದ ಮೇಲೆ ಕ್ರಮ ಸಂಖ್ಯೆ (3)ರಲ್ಲಿ ಓದಲಾದ ದಿನಾಂಕ:16.6.2006ರ ಸರ್ಕಾರಿ ಆದೇಶ ಸಂಖ್ಯೆ:ಕಂಇ 3 ಮುತಬ 2006ನ್ನು ರದ್ದುಪಡಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 3 ಮುತಬ 2006, ಬೆಂಗಳೂರು, ದಿನಾಂಕ: 29ನೇ ಜೂನ್ 2006**

ಪ್ರಸ್ತಾವನೆಯಲ್ಲಿ ಕೂಲಂಕಷವಾಗಿ ಪರಿಶೀಲಿಸಿರುವ ಹಿನ್ನೆಲೆಯಲ್ಲಿ ರಾಜ್ಯದಲ್ಲಿ ಧಾಮಿಕ ಮತ್ತು ಧರ್ಮಾದಾಯ ಸಂಸ್ಥೆಗಳಿಗೆ ವಾರ್ಷಿಕ ತಸ್ತೀಕ್ ಲೆಕ್ಕಶೀರ್ಷಿಕೆ - "2075-00-101-1-01" ರಡಿ ರೂ.2,124.48 ಲಕ್ಷಗಳನ್ನು (ಎರಡು ಸಾವಿರದ ಒಂದು ನೂರ ಇಪ್ಪತ್ತನಾಲ್ಕು ಲಕ್ಷ ನಲ್ವತ್ತೆಂಟು ಸಾವಿರ ರೂಪಾಯಿಗಳು ಮಾತ್ರ) ಒದಗಿಸಲಾಗಿದ್ದು, ಈ ಮೊತ್ತದಲ್ಲಿ ವಾರ್ಷಿಕ ತಸ್ತೀಕ್ ಮೊತ್ತ ರೂ.5,999/-ಕ್ಕೆ (ಐದು ಸಾವಿರದ ಒಂಬತ್ತುನೂರ ತೊಂಭತ್ತೊಂಭತ್ತು ರೂಪಾಯಿಗಳು ಮಾತ್ರ) ಕಡಿಮೆ ಇರುವ ಸಂಸ್ಥೆಗಳಿಗೆ ರೂ.6,000/- (ಆರು ಸಾವಿರ ರೂಪಾಯಿಗಳು ಮಾತ್ರ) ತಸ್ತೀಕನ್ನು ನಿಗದಿಪಡಿಸಿ ಮಂಜೂರು ಮಾಡಲು ಧಾರ್ಮಿಕ ದತ್ತಿ ಆಯುಕ್ತರಿಗೆ 2006-07ನೇ ಸಾಲಿನಿಂದ ಜಾರಿಗೆ ಬರುವಂತೆ ಅನುಮತಿ ನೀಡಿ ಆದೇಶಿಸಿದೆ.

ದಿನಾಂಕ:16.6.2006ರ ಸರ್ಕಾರಿ ಆದೇಶ ಸಂಖ್ಯೆ:ಕಂಇ3ಮುತಬ2006ನ್ನು ಈ ಮೂಲಕ ರದ್ದುಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಎನ್. ಪ್ರಸಾದ್**

ಪಿ.ಆರ್. 1026 ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಮುಜರಾಯಿ).

**ವಿಷಯ:** ಕೊಪ್ಪಳ ಜಿಲ್ಲೆಯ ಯಲಬುರ್ಗ ತಾಲ್ಲೋಕಿನ ಅರಕೇರಾ ಗ್ರಾಮದ ಸರ್ವೆ ನಂಬರುಗಳನ್ನು ಮುಳುಗಡೆ ಸಲುವಾಗಿ ಭೂಸ್ವಾಧೀಪಡಿಸಿಕೊಂಡಿದ್ದು, ಅವುಗಳಲ್ಲಿದ್ದ ಇತರ ವಿವಿಧ ಮಾಲ್ಕಿಗಳಿಗೆ ಲೆಕ್ಕ ಮಾಡಿ ಪರಿಹಾರ ಧನದಲ್ಲಿ ಶೇ.25 ರಂತೆ ಕಡಿತಗೊಳಿಸಿದ ಸವಕಳಿ ಮೊತ್ತವನ್ನು ಮರು ಪಾವತಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ನಂ: ಆರ್ ಡಿ 240 ಆರ್ ಇ ಹೆಚ್ 2000 ದಿನಾಂಕ: 27.2.2003.
2. ಜಿಲ್ಲಾಧಿಕಾರಿಗಳು, ಕೊಪ್ಪಳ ರವರ ಪತ್ರ ಸಂ: ಕಂದಾಯ:ಭೂಸ್ವಾ 31/2003-04, ದಿನಾಂಕ:2.5.2006.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ಹಿರೇಹಳ್ಳ ಯೋಜನೆಯಡಿ ಮುಳುಗಡೆಯಾದ ಮೀನುಗಳಲ್ಲಿರುವ ಮಾಲ್ಕಿಗಳಿಗೆ ಸಂಬಂಧಿಸಿದಂತೆ ಯಲಬುರ್ಗಾ ತಾಲ್ಲೋಕಿನ ಅರಕೆರೆ ಗ್ರಾಮದಲ್ಲಿ ಸ್ವಾಧೀನಪಡಿಸಿಕೊಂಡ ಮನೆಗಳಿಗೆ ನೀಡಲಾದ ಪರಿಹಾರ ಹಣದಲ್ಲಿ ಕಡಿತಗೊಳಿಸಿದ ಸವೆಕಳಿ ಹಣವನ್ನು ಎಕ್ಸಗ್ರೇಷಿಯಾ ರೂಪದಲ್ಲಿ ಮರು ಪಾವತಿಸಲು ಆದೇಶಿಸಲಾಗಿತ್ತು. ಸದರಿ ಆದೇಶದನ್ವಯ ಮುಳುಗಡೆಯಾದ ಇತರೆ ಜಮೀನುಗಳಲ್ಲಿರುವ ಮಾಲ್ಕಿಗಳಿಗೆ ಸಂಬಂಧಿಸಿದಂತೆ ಕಡಿತಗೊಳಿಸಲಾದ ಶೇ 25ರ ಸವಕಳಿ ಮೊತ್ತವನ್ನು ಪಾವತಿಸುವಂತೆ ಜಮೀನುಗಳ ಮಾಜಿ ಭೂಮಾಲೀಕರು ಸಲ್ಲಿಸಿದ ಮನವಿಯನ್ನು ಪರಿಗಣಿಸಿ ರೂ.2,03,258/- ಗಳನ್ನು ಎಕ್ಸಗ್ರೇಷಿಯಾ ರೂಪದಲ್ಲಿ ಹಿಂತಿರುಗಿಸಲು ಜಿಲ್ಲಾಧಿಕಾರಿಗಳು ಶಿಫಾರಸ್ಸು ಮಾಡಿರುತ್ತಾರೆ.

ಜಿಲ್ಲಾಧಿಕಾರಿಗಳು ಶಿಫಾರಸ್ಸು ಮಾಡಿರುವುದನ್ನು ಸರ್ಕಾರವು ಪರಿಗಣಿಸಿ ಈ ಕೆಳಕಂಡಂತೆ ಆದೇಶಿಸಿರುತ್ತೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 72 ಭೂಸ್ವಾರಾ 2005, ದಿನಾಂಕ: 26ನೇ ಜೂನ್ 2006**

ಹಿರೇಹಳ್ಳ ಯೋಜನೆಯಡಿ ಮುಳುಗಡೆಯಾದ ಜಮೀನುಗಳಲ್ಲಿರುವ ಇತರೆ ಮಾಲ್ಕಿಗಳಿಗೆ ಸಂಬಂಧಿಸಿದಂತೆ ಸ್ವಾಧೀನಪಡಿಸಿಕೊಂಡ ಮನೆಗಳಿಗೆ ನೀಡಲಾದ ಪರಿಹಾರ ಹಣದಲ್ಲಿ ಕಡಿತಗೊಳಿಸಿದ ಶೇ.25/- ಸವಕಳಿ ಮೊತ್ತ ರೂ.2,03,258/- ಎರಡು ಲಕ್ಷ ಮೂರುಸಾವಿರದ ಇನ್ನೂರ ಐವತ್ತೆಂಟು) ಮಾತ್ರ ಎಕ್ಸಗ್ರೇಷಿಯಾ ರೂಪದಲ್ಲಿ ಮರು ಪಾವತಿಸಲು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ನಾಗರತ್ನ**

ಪಿ.ಆರ್. 1027 ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂಸ್ವಾಧೀನ 1 & 3).

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಕರ್ನಾಟಕ-ಮಹಾರಾಷ್ಟ್ರ-ಕೇರಳ ಗಡಿ ವಿವಾದದ ಬಗ್ಗೆ ಉನ್ನತ ಮಟ್ಟದ ಗಡಿ ವಿವಾದ ಸಲಹಾ ಸಮಿತಿಯ ಪುನರ್ ರಚನೆ ಬಗ್ಗೆ.

**ಓದಲಾಗಿದೆ:**
1. ದಿನಾಂಕ:1.4.2003ರ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ರಾಜಕೀಯ) ವಿಭಾಗದ ಅ.ಟಿಸಂಖ್ಯೆ: ಸಿಆಸುಇ 3 ರಾಗವಿ 2002.
2. ದಿನಾಂಕ: 20.6.2003ರ ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 3 ರಾಗವಿ 2002.
3. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 13 ರಾಗವಿ 2002 ದಿನಾಂಕ: 7.8.2003.
4. ದಿನಾಂಕ: 08.10.2004ರ ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 19 ರಾಗವಿ 2004.
5. ದಿನಾಂಕ: 11.10.2004ರ ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 20 ರಾಗವಿ 2004.

**ಪ್ರಸ್ತಾವನೆ:**

ಕರ್ನಾಟಕ-ಮಹಾರಾಷ್ಟ್ರ-ಕೇರಳ ಗಡಿ ವಿವಾದವು ಮಹಾಜನ್ ಆಯೋಗದ ತೀರ್ಮಾನದ ಪ್ರಕಾರ ಮುಗಿದ ಅಧ್ಯಾಯವೆಂದು ಕರ್ನಾಟಕ ಸರ್ಕಾರವು ಭಾವಿಸಿತ್ತು. ಆದರೆ, ಮಹಾರಾಷ್ಟ್ರ ಸರ್ಕಾರವು, ಕರ್ನಾಟಕ-ಮಹಾರಾಷ್ಟ್ರ ಗಡಿ ವಿವಾದದ ಕುರಿತು ಸರ್ವೋಚ್ಚ ನ್ಯಾಯಾಲಯದಲ್ಲಿ ದಾವೆ ಹೂಡಬಹುದೆಂದು ತಿಳಿದು ಬಂದ ಪ್ರಯುಕ್ತ, ಕರ್ನಾಟಕ ರಾಜ್ಯದ ಪರವಾಗಿ ಸರ್ವೋಚ್ಚ ನ್ಯಾಯಾಲಯದಲ್ಲಿ ವಾದಿಸಲು ಅನುಕೂಲವಾಗುವಂತೆ, ಮೂರು ಜನ ಹಿರಿಯ ನ್ಯಾಯವಾದಿಗಳನ್ನೊಳಗೊಂಡ ಕಾನೂನು ತಜ್ಞರ ಸಮಿತಿಯನ್ನು ರಚಿಸಲು ಕ್ರಮ ಸಂಖ್ಯೆ : (1)ರಲ್ಲಿ ಓದಲಾದ ಅನಧಿಕೃತ ಟಿಪ್ಪಣಿಲ್ಲಿ ಕೋರಲಾಗಿತ್ತು.

ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ:20.6.2003ರ ಸರ್ಕಾರದ ಆದೇಶದಲ್ಲಿ, ಸರ್ವೋಚ್ಚ ನ್ಯಾಯಾಲಯದಲ್ಲಿ ಕರ್ನಾಟಕದ ಪರವಾಗಿ ವಾದ ಮಾಡುವ ಕಾನೂನು ತಜ್ಞರ ಸಮಿತಿಗೆ ಅಗತ್ಯವಿರುವ ಮಾಹಿತಿಯನ್ನು ಸಂಗ್ರಹಿಸಿ, ಕ್ರೋಢೀಕರಿಸಿ ಒದಗಿಸುವ ಸಲುವಾಗಿ ಹಿರಿಯ ನ್ಯಾಯವಾದಿಗಳಾದ ಶ್ರೀ ಹೆಚ್.ಬಿ. ದಾತಾರ್ ಅವರ ಅಧ್ಯಕ್ಷತೆಯಲ್ಲಿ, ಒಂದು ವಿಶೇಷ ಕಾನೂನು ಸಲಹಾ ಸಮಿತಿಯನ್ನು ರಚಿಸಲಾಗಿತ್ತು. ಈ ಸಮಿತಿಯನ್ನು ಕ್ರಮ ಸಂಖ್ಯೆ (4)ರಲ್ಲಿ ಓದಲಾದ ಆದೇಶದಲ್ಲಿ ಪುನರ್ ರಚಿಸಲಾಗಿದೆ.

ಕರ್ನಾಟಕ-ಮಹಾರಾಷ್ಟ್ರ ಗಡಿ ವಿವಾದದ ಬಗ್ಗೆ ಕಾನೂನು ತಜ್ಞರ ಸಮಿತಿ ಹಾಗೂ ವಿಶೇಷ ಕಾನೂನು ಸಲಹಾ ಸಮಿತಿಗಳಲ್ಲದೆ, ಈ ವಿಷಯದಲ್ಲಿ ಏನಾದರೂ ರಾಜಕೀಯ ತೊಡಕುಗಳುಂಟಾದಲ್ಲಿ, ಅದರ ಪರಿಹಾರಕ್ಕೋಸ್ಕರ, ಕರ್ನಾಟಕದ ಮುಖ್ಯ ಮಂತ್ರಿಯವರ ಅಧ್ಯಕ್ಷತೆಯಲ್ಲಿ ಒಂದು ಉನ್ನತ ಮಟ್ಟದ ಸಲಹಾ ಸಮಿತಿಯನ್ನು ಕ್ರಮ ಸಂಖ್ಯೆ (5)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ರಚಿಸಲಾಗಿತ್ತು. ಸರ್ಕಾರವು ಸದರಿ ಸಮಿತಿಯನ್ನು ಪುನರ್ ರಚಿಸಲು ತೀರ್ಮಾನಿಸಿದೆ. ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 04 ರಾಗವಿ 2006, ಬೆಂಗಳೂರು, ದಿನಾಂಕ: 29ನೇ ಜೂನ್ 2006**

ಮೇಲೆ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 20 ರಾಗವಿ 2004, ದಿನಾಂಕ: 11.10.2004ರಲ್ಲಿ ರಚಿಸಲಾಗಿದ್ದ ಉನ್ನತ ಮಟ್ಟದ ಗಡಿ ವಿವಾದ ಸಲಹಾ ಸಮಿತಿಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ಮುಂದಿನ ಆದೇಶದಲ್ಲಿ ಈ ಕೆಳಕಂಡಂತೆ ಪುನರ್ ರಚಿಸಿ ಸರ್ಕಾರ ಆದೇಶ ಹೊರಡಿಸಿದೆ.

| | | |
|---|---|---|
| 1. | ಮುಖ್ಯ ಮಂತ್ರಿಗಳು | ಅಧ್ಯಕ್ಷರು |
| 2. | ಉಪ ಮುಖ್ಯ ಮಂತ್ರಿಗಳು | ಸದಸ್ಯರು |
| 3. | ಕಾನೂನು ಸಚಿವರು, ವಿಧಾನ ಸೌಧ, ಬೆಂಗಳೂರು. | ಸದಸ್ಯರು |
| 4. | ಕಂದಾಯ ಸಚಿವರು, ವಿಧಾನ ಸೌಧ, ಬೆಂಗಳೂರು. | ಸದಸ್ಯರು |
| 5. | ವಿಧಾನ ಸಭೆಯ ವಿರೋಧ ಪಕ್ಷದ ನಾಯಕರು, ವಿಧಾನ ಸೌಧ, ಬೆಂಗಳೂರು. | ಸದಸ್ಯರು |
| 6. | ವಿಧಾನ ಪರಿಷತ್ತಿನ ವಿರೋಧ ಪಕ್ಷದ ನಾಯಕರು, ವಿಧಾನ ಸೌಧ, ಬೆಂಗಳೂರು. | ಸದಸ್ಯರು |
| 7. | ಶ್ರೀ ಅಂಗಡಿ ಸುರೇಶ್ ಚೆನ್ನಬಸಪ್ಪ, ಬೆಳಗಾವಿ ಕ್ಷೇತ್ರದ ಸಂಸತ್ ಸದಸ್ಯರು. | ಸದಸ್ಯರು |
| 8. | ಶ್ರೀ ಜಿಗಜಿಣಗಿ ರಮೇಶ್ ಚಂದ್ರಪ್ಪ, ಚಿಕ್ಕೋಡಿ ಕ್ಷೇತ್ರದ ಸಂಸತ್ ಸದಸ್ಯರು. | ಸದಸ್ಯರು |
| 9. | ಶ್ರೀ ಡಿ.ವಿ. ಸದಾನಂದ ಗೌಡ, ಮಂಗಳೂರು ಕ್ಷೇತ್ರದ ಸಂಸತ್ ಸದಸ್ಯರು. | ಸದಸ್ಯರು |
| 10. | ಅಧ್ಯಕ್ಷರು, ಕನ್ನಡ ಸಾಹಿತ್ಯ ಪರಿಷತ್ತು ಚಾಮರಾಜಪೇಟೆ, ಬೆಂಗಳೂರು. | ಸದಸ್ಯರು |
| 11. | ಶ್ರೀ ಚೆನ್ನವೀರ ಕಣವಿ, ಸಾಹಿತಿಗಳು, ಧಾರವಾಡ. | ಸದಸ್ಯರು |
| 12. | ಪ್ರೊ: ಡಿ. ಜವರೇಗೌಡ,<br>ನಿವೃತ್ತ ಉಪ ಕುಲಪತಿಗಳು, ಮೈಸೂರು ವಿಶ್ವವಿದ್ಯಾಲಯ, ಮೈಸೂರು. | ಸದಸ್ಯರು |
| 13. | ಶ್ರೀ ಪಾಟೀಲ ಪುಟ್ಟಪ್ಪ,<br>ಮಾಜಿ ಅಧ್ಯಕ್ಷರು, ಕನ್ನಡ ಕಾವಲು ಮತ್ತು ಗಡಿ ಸಲಹಾ ಸಮಿತಿ, ಹುಬ್ಬಳ್ಳಿ. | ಸದಸ್ಯರು |
| 14. | ಶ್ರೀ ಚಂದ್ರಶೇಖರ ಪಾಟೀಲ್,<br>ಮಾಜಿ ಅಧ್ಯಕ್ಷರು, ಕನ್ನಡ ಕಾವಲು ಮತ್ತು ಗಡಿ ಸಲಹಾ ಸಮಿತಿ, ಬೆಂಗಳೂರು. | ಸದಸ್ಯರು |
| 15. | ಶ್ರೀ ವಾಟಾಳ್ ನಾಗರಾಜ್, ವಿಧಾನ ಸಭಾ ಸದಸ್ಯರು | ಸದಸ್ಯರು |
| 16. | ಶ್ರೀ ಜಿ. ನಾರಾಯಣ,<br>ಮಾಜಿ ಅಧ್ಯಕ್ಷರು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು. | ಸದಸ್ಯರು |
| 17. | ಶ್ರೀ ಚಿದಾನಂದ ಮೂರ್ತಿ,<br>ಸಂಶೋಧಕರು ಹಾಗೂ ಪ್ರಾಧ್ಯಾಪಕರು, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು. | ಸದಸ್ಯರು |
| 18. | ಶ್ರೀ ಬಿ. ಶಂಕರಾನಂದ, ಮಾಜಿ ಕೇಂದ್ರ ಮಂತ್ರಿಗಳು, ಬೆಳಗಾವಿ. | ಸದಸ್ಯರು |
| 19. | ಸರ್ಕಾರದ ಮುಖ್ಯ ಕಾರ್ಯದರ್ಶಿಗಳು,<br>ಕರ್ನಾಟಕ ಸರ್ಕಾರ, ವಿಧಾನ ಸೌಧ, ಬೆಂಗಳೂರು. | ಸದಸ್ಯರು |
| 20. | ಪ್ರಾದೇಶಿಕ ಆಯುಕ್ತರು, ಬೆಳಗಾವಿ ವಿಭಾಗ, ಬೆಳಗಾಂ. | ಸದಸ್ಯರು |
| 21. | ಸರ್ಕಾರದ ಕಾರ್ಯದರ್ಶಿ,<br>ಕಾನೂನು ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ, ವಿಧಾನ ಸೌಧ, ಬೆಂಗಳೂರು. | ಸದಸ್ಯರು |
| 22. | ಸರ್ಕಾರದ ಕಾರ್ಯದರ್ಶಿಗಳು,<br>ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ, ವಿಧಾನ ಸೌಧ, ಬೆಂಗಳೂರು. | ಸದಸ್ಯ ಕಾರ್ಯದರ್ಶಿ |

ಈ ಸಮಿತಿಯ, ಕರ್ನಾಟಕ - ಮಹಾರಾಷ್ಟ್ರ ಗಡಿ ವಿವಾದದ ಬಗ್ಗೆ ಕರ್ನಾಟಕ ಸರ್ಕಾರದ ಪರವಾಗಿ ಸರ್ವೋಚ್ಚ ನ್ಯಾಯಾಲಯದಲ್ಲಿ ವಾದಿಸುವ ಹಿರಿಯ ನ್ಯಾಯವಾದಿಗಳಿಗೆ ಸೂಕ್ತ ಮಾರ್ಗದರ್ಶನ/ಮಾಹಿತಿ/ಸಲಹೆಗಳನ್ನು ನೀಡುವುದು ಮತ್ತು ಗಡಿ ವಿವಾದಕ್ಕೆ ಸಂಬಂಧಿಸಿದಂತೆ ಉದ್ಭವಿಸಬಹುದಾದ ರಾಜಕೀಯ ಅಂಶಗಳನ್ನು ಪರಿಶೀಲಿಸಿ ತೀರ್ಮಾನ ತೆಗೆದುಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ. ವೀರಣ್ಣ**

ಪಿ.ಆರ್. 1029

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ರಾಜಕೀಯ)

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ:** ಉಪ ನಿರ್ದೇಶಕರು, ಖಾದಿ ಮತ್ತು ಗ್ರಾಮೋದ್ಯೋಗ ಇಲಾಖೆ ಇವರು ಯೋಜನಾ ನಿರ್ದೇಶಕರು, (ಡಿಆರ್‌ಡಿಎ) ಇವರ ಅಧೀನದಲ್ಲಿ ಕೆಲಸ ನಿರ್ವಹಿಸುವ ಬಗ್ಗೆ.

**ಓದಲಾಗಿದೆ:** ಸರ್ಕಾರದ ಸುತ್ತೋಲೆ ಸಂಖ್ಯೆ: ಗ್ರಾಅಪ 2 ಎಸ್‌ಇಪಿ (ಇತರೆ) 2006 ದಿನಾಂಕ: 2.2.2006.

**ಪ್ರಸ್ತಾವನೆ:**

ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆ (ಎಸ್‌ಜಿಎಸ್‌ವೈ) ಯನ್ನು ದಿನಾಂಕ: 1.4.1999 ರಿಂದ ಕೇಂದ್ರ ಸರ್ಕಾರ ಜಾರಿಗೊಳಿಸಿದೆ. ಇದು ಸ್ವಯಂ ಉದ್ಯೋಗ ಯೋಜನೆಯಾಗಿದ್ದು, ಬಡಜನರನ್ನು ಸ್ವಸಹಾಯ ಗುಂಪುಗಳಾಗಿ ರಚನೆ ಮಾಡುವುದು, ತರಬೇತಿ, ಸಾಲ, ತಂತ್ರಜ್ಞಾನ, ಮೂಲಸ್ವತ್ತು ಅಭಿವೃದ್ಧಿ ಮತ್ತು ಮಾರುಕಟ್ಟೆ ಒದಗಿಸುವ ಸಮಗ್ರ ಯೋಜನೆಯಾಗಿದೆ. ನೆರವು ನೀಡಿದ ಕುಟುಂಬಗಳನ್ನು ಬಡತನ ರೇಖೆಯಿಂದ ಮೇಲೆತ್ತುವುದೇ ಇದರ ಪ್ರಮುಖ ಉದ್ದೇಶ. ಕೃಷಿ, ತೋಟಗಾರಿಕೆ, ರೇಷ್ಮೆ, ಪಶುಸಂಗೋಪನೆ ಮೀನುಗಾರಿಕೆ, ಕೈಮಗ್ಗ ಮತ್ತು ಜವಳಿ ಇಲಾಖೆ, ಖಾದಿ ಮತ್ತು ಗ್ರಾಮೋದ್ಯೋಗ ಇಲಾಖೆಗಳ ಸಹಯೋಗದೊಂದಿಗೆ ಯೋಜನೆಯನ್ನು ಅನುಷ್ಠಾನಗೊಳಿಸಲಾಗುತ್ತಿದೆ. ಈ ಯೋಜನೆಯ ಅನುಷ್ಠಾನಕ್ಕಾಗಿ ಆಡಳಿತ ವ್ಯವಸ್ಥೆಯನ್ನು ಬಲಪಡಿಸಬೇಕಾಗಿದೆ. ಈ ಉದ್ದೇಶಕ್ಕಾಗಿ ಜಿಲ್ಲಾ ಪಂಚಾಯತ್ ಅಧೀನದಲ್ಲಿ ಕೆಲಸ ನಿರ್ವಹಿಸುತ್ತಿರುವ ಖಾದಿ ಮತ್ತು ಗ್ರಾಮೋದ್ಯೋಗ ಇಲಾಖೆಯ ಉಪ ನಿರ್ದೇಶಕರಿಗೆ ಯೋಜನಾ ನಿರ್ದೇಶಕರು (ಡಿಆರ್‌ಡಿಎ) ಇವರ ಅಧೀನದಲ್ಲಿ ಕೆಲಸ ನಿರ್ವಹಿಸುವಂತೆ ಆದೇಶಿಸಬಹುದಾಗಿದೆ ಹಾಗೂ ಉಪ ನಿರ್ದೇಶಕರು, ಖಾದಿ ಮತ್ತು ಗ್ರಾಮೋದ್ಯೋಗ ಇವರ ಅಧೀನದಲ್ಲಿ ಕೆಲಸ ನಿರ್ವಹಿಸುತ್ತಿರುವ ಕೈಗಾರಿಕಾ ವಿಸ್ತರಣಾಧಿಕಾರಿಗಳಿಗೆ ತಾಲ್ಲೂಕು ಮಟ್ಟದಲ್ಲಿ ಎಸ್‌ಜಿಎಸ್‌ವೈ ಯೋಜನೆಯ ಅನುಷ್ಠಾನದ ಜವಾಬ್ದಾರಿಯನ್ನು ವಹಿಸಬೇಕಾಗಿದೆ. ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 2 ಎಸ್‌ಇಪಿ (ಇತರೆ) 2006, ಬೆಂಗಳೂರು, ದಿನಾಂಕ: 23ನೇ ಜೂನ್ 2006**

1. ಮೇಲೆ ವಿವರಿಸಿರುವ ಪ್ರಸ್ತಾವನೆಯ ಹಿನ್ನೆಲೆಯಲ್ಲಿ, ಉಪ ನಿರ್ದೇಶಕರು, ಖಾದಿ ಮತ್ತು ಗ್ರಾಮೋದ್ಯೋಗ ಇವರು ಜಿಲ್ಲಾ ಪಂಚಾಯತ್‌ನ ಯೋಜನಾ ನಿರ್ದೇಶಕರು (ಡಿಆರ್‌ಡಿಎ) ಇವರ ಅಧೀನದಲ್ಲಿ ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆ (ಎಸ್‌ಜಿಎಸ್‌ವೈ)ಯನ್ನು ಅನುಷ್ಠಾನಗೊಳಿಸಲು ಆದೇಶಿಸಲಾಗಿದೆ. ಉಪ ನಿರ್ದೇಶಕರ ಕಛೇರಿ ಮತ್ತು ಸಿಬ್ಬಂದಿಯು ಯೋಜನಾ ನಿರ್ದೇಶಕರ ಉಸ್ತುವಾರಿಯಲ್ಲಿ ಕೆಲಸ ನಿರ್ವಹಿಸುತ್ತದೆ.
2. ಯೋಜನಾ ನಿರ್ದೇಶಕರು, ಡಿಆರ್‌ಡಿಎ ಕೋಶದೊಂದಿಗೆ ಉಪ ನಿರ್ದೇಶಕರು, ಖಾದಿ ಮತ್ತು ಗ್ರಾಮೋದ್ಯೋಗ ಇವರ ಕಛೇರಿಯನ್ನು ಒಂದು ತಿಂಗಳೊಳಗಾಗಿ ವಿಲೀನಗೊಳಿಸುವುದು ಮತ್ತು ಮೂರು ತಿಂಗಳೊಳಗೆ ಜಿಲ್ಲಾ ಪಂಚಾಯತಿಯ ಕಛೇರಿಗೆ ಸ್ಥಳಾಂತರಿಸುವುದು.
3. ಯೋಜನಾ ನಿರ್ದೇಶಕರು (ಡಿಆರ್‌ಡಿಎ), ಉಪ ನಿರ್ದೇಶಕರು ಖಾದಿ ಮತ್ತು ಗ್ರಾಮೋದ್ಯೋಗ ಹಾಗೂ ತಾಲ್ಲೂಕು ಕಾರ್ಯನಿರ್ವಹಣಾಧಿಕಾರಿಗಳ ಅಧೀನದಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಕೈಗಾರಿಕಾ ವಿಸ್ತರಣಾಧಿಕಾರಿಗಳನ್ನು ತಾಲ್ಲೂಕಿನ ಎಸ್‌ಜಿಎಸ್‌ವೈ ಅನುಷ್ಠಾನಾಧಿಕಾರಿಯಾಗಿ ನೇಮಕ ಮಾಡಲಾಗಿದೆ. ಕೈಗಾರಿಕಾ ವಿಸ್ತರಣಾಧಿಕಾರಿಗಳ ಕಛೇರಿಯನ್ನು ಮೂರು ತಿಂಗಳೊಳಗಾಗಿ ಕಾರ್ಯನಿರ್ವಹಣಾಧಿಕಾರಿ, ತಾಲ್ಲೂಕು ಪಂಚಾಯಿತಿ ಕಛೇರಿ ಸ್ಥಳಾಂತರಿಸಲು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್. ಶಿವಶೈಲಂ**

ಪಿ.ಆರ್. 1030 ಸರ್ಕಾರದ ಕಾರ್ಯದರ್ಶಿ,

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ:** ಸಂಪೂರ್ಣ ಗ್ರಾಮೀಣ ರೋಜ್‌ಗಾರ್ ಯೋಜನೆಯಡಿ ಕೇಂದ್ರ ಸರ್ಕಾರದ ಎರಡನೇ ಕಂತಿನ ಅನುದಾನಕ್ಕೆ ಪೂರಕವಾಗಿ ಜಿಲ್ಲಾ ಪಂಚಾಯತಿಗಳಿಗೆ ಶೇಕಡಾ 20ರ ಭಾಗಾಂಶದ ರಾಜ್ಯದ ಪಾಲಿನ ಎರಡನೇ ಕಂತಿನ ಅನುದಾನವನ್ನು 12 ಜಿಲ್ಲೆಗಳಿಗೆ ಬಿಡುಗಡೆ ಮಾಡುವ ಬಗ್ಗೆ.

**ಉಲ್ಲೇಖ:**
1. ಕೇಂದ್ರ ಸರ್ಕಾರದ ಪತ್ರದ ಸಂಖ್ಯೆ:ವಿ.24015/12/2005/ಎಸ್‌ಜಿಆರ್‌ವೈ-II/ Sl.No.144 ದಿನಾಂಕ:27.12.2005 (11 ಜಿಲ್ಲೆಗಳಿಗೆ)
2. ಕೇಂದ್ರ ಸರ್ಕಾರದ ಪತ್ರದ ಸಂಖ್ಯೆ.ವಿ.24015/12/2005/ಎಸ್‌ಜಿಆರ್‌ವೈ-II/ Sl.No.165 ದಿನಾಂಕ:5.1.2006 (9 ಜಿಲ್ಲೆಗಳಿಗೆ)
3. ಸರ್ಕಾರದ ಆದೇಶ ಸಂ. ಆರ್‌ಡಿಪಿ/16/ಎಸ್‌ಜಿಆರ್‌ವೈ/2006 ದಿನಾಂಕ:19.5.06.

**ಪ್ರಸ್ತಾವನೆ:**

ಕೇಂದ್ರ ಸರ್ಕಾರವು ಉಲ್ಲೇಖ (1) ಮತ್ತು (2)ರಲ್ಲಿ ಸಂಪೂರ್ಣ ಗ್ರಾಮೀಣ ರೋಜ್‌ಗಾರ್ ಯೋಜನೆಯಡಿ, 2005-06ನೇ ಸಾಲಿಗೆ ಎರಡನೇ ಕಂತಿನ ಅನುದಾನವನ್ನು ಕ್ರಮವಾಗಿ 11 ಮತ್ತು 9 ಜಿಲ್ಲೆಗಳಿಗೆ ಹೀಗೆ ಒಟ್ಟು 20 ಜಿಲ್ಲಾ ಪಂಚಾಯತಿಗಳಿಗೆ ನೇರವಾಗಿ ಬಿಡುಗಡೆ ಮಾಡಿ, ರಾಜ್ಯದ ಪಾಲಿನ ಅನುದಾನವನ್ನು ಬಿಡುಗಡೆ ಮಾಡುವಂತೆ ಆದೇಶಿಸಿದೆ. 2005-06ನೇ ಸಾಲಿನಲ್ಲಿ ಆಡಳಿತಾತ್ಮಕ ತೊಂದರೆಗಳಿಂದ ರಾಜ್ಯದ ಪಾಲಿನ ಅನುದಾನವನ್ನು 20 ಜಿಲ್ಲಾ ಪಂಚಾಯತಿಗಳಿಗೆ ಸಕಾಲಕ್ಕೆ ಬಿಡುಗಡೆ ಮಾಡಲು ಸಾಧ್ಯವಾಗಿರುವುದಿಲ್ಲ. ಆದ್ದರಿಂದ, ರಾಜ್ಯ ಸರ್ಕಾರವು 20 ಜಿಲ್ಲಾ ಪಂಚಾಯತಿಗಳಿಗೆ ಎರಡನೇ ಕಂತಿನ ಶೇಕಡಾ 20ರ ಭಾಗಾಂಶದ ರೂ. 404.462 ಲಕ್ಷಗಳನ್ನು (ರೂ. ನಾಲ್ಕು ಕೋಟಿ ನಾಲ್ಕು ಲಕ್ಷದ ನಲವತ್ತಾರು ಸಾವಿರದ ಇನ್ನೂರು ಮಾತ್ರ) ಉಲ್ಲೇಖ (3)ರಲ್ಲಿ ಬಿಡುಗಡೆ ಮಾಡಲಾಗಿದೆ. ಬಿಡುಗಡೆ ಮಾಡಬೇಕಾದ ಬಾಕಿ ಅನುದಾನ ರೂ. 19.448 (ರೂ. ಹತ್ತೊಂಬತ್ತು ಲಕ್ಷದ ನಲವತ್ತ ನಾಲ್ಕು ಸಾವಿರದ ಎಂಟುನೂರು ಮಾತ್ರ) ಗಳನ್ನು 12 ಜಿಲ್ಲೆಗಳಿಗೆ ಈಗ ಬಿಡುಗಡೆ ಮಾಡಲು ನಿರ್ಧರಿಸಿದೆ. ಆದ್ದರಿಂದ ಕೆಳಕಂಡ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶದ ಸಂಖ್ಯೆ:ಗ್ರಾಅಪ.16. ಎಸ್‌ಜಿಆರ್‌ವೈ. 2006, ಬೆಂಗಳೂರು, ದಿನಾಂಕ: 19ನೇ ಜೂನ್ 2006**

ಪ್ರಸ್ತಾವನೆಯಲ್ಲಿ ವಿವರಿಸಿದಂತೆ, 2006-07ನೇ ಸಾಲಿನಲ್ಲಿ ಸಂಪೂರ್ಣ ಗ್ರಾಮೀಣ ರೋಜ್‌ಗಾರ್ ಯೋಜನೆಯ ಜಿಲ್ಲಾ ಪಂಚಾಯತ್ ಕಾರ್ಯಕ್ರಮಗಳ ಅನುಷ್ಠಾನಕ್ಕಾಗಿ ರಾಜ್ಯದ 12 ಜಿಲ್ಲಾ ಪಂಚಾಯತಿಗಳಿಗೆ ಬಾಕಿ ಇರುವ ಎರಡನೇ ಕಂತಿನ ಅನುದಾನವಾದ ರೂ.19.448 ಲಕ್ಷಗಳನ್ನು (ರೂ.ಹತ್ತೊಂಭತ್ತು ಲಕ್ಷದ ನಲವತ್ತ ನಾಲ್ಕು ಸಾವಿರದ ಎಂಟು ನೂರು ಮಾತ್ರ) ಅನಬಂಧದಲ್ಲಿ ನಮೂದಿಸಿದಂತೆ, ಜಿಲ್ಲಾ ಪಂಚಾಯತಿಗಳಿಗೆ ಬಿಡುಗಡೆ ಮಾಡಿದೆ.

2006-07ನೇ ಸಾಲಿನಲ್ಲಿ ಸಂಪೂರ್ಣ ಗ್ರಾಮೀಣ ರೋಜ್‌ಗಾರ್ ಯೋಜನೆಗೆ ಈಗಾಗಲೇ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಬಿಡುಗಡೆಯ ಆದೇಶಗಳಲ್ಲಿ ಸುತ್ತೋಲೆಗಳ ಮೂಲಕ ಹಾಗೂ ಮಾರ್ಗಸೂಚಿಗಳಲ್ಲಿ ತಿಳಿಸಿರುವ ರೀತ್ಯಾ ಎಲ್ಲಾ ಷರತ್ತುಗಳನ್ನು ಮತ್ತು ನಿಯಮಗಳನ್ನು ಕಟ್ಟುನಿಟ್ಟಾಗಿ ಪಾಲಿಸತಕ್ಕದ್ದು ಯೋಜನೆಯ ಅನುದಾನದ ವೆಚ್ಚವನ್ನು ಈ ಕೆಳಕಂಡ ಲೆಕ್ಕ ಶೀರ್ಷಿಕೆಯಲ್ಲಿ ಭರಿಸತಕ್ಕದ್ದು,

ಜಿಲ್ಲಾ ಪಂಚಾಯತಿ "2505-ಗ್ರಾಮೀಣ ಉದ್ಯೋಗ-60-ಇತರೆ ಕಾರ್ಯಕ್ರಮಗಳು-196 ಜಿಲ್ಲಾ ಪಂಚಾಯತಿಗಳಿಗೆ ಸಹಾಯ-6-ಜಿಲ್ಲಾ ಪಂಚಾಯತಿಗಳು-04-ಸಂಪೂರ್ಣ ಗ್ರಾಮೀಣ ರೋಜ್‌ಗಾರ್ ಯೋಜನೆ (2505-60-196-6-04) 2006-07 (ಯೋಜನೆ)"

ಸರ್ಕಾರಿ ಆದೇಶ ಸಂಖ್ಯೆ. ಎಫ್‌ಡಿ.7. ಜೆಡ್‌ಪಿಎ.2003 ದಿನಾಂಕ:14.7.2005 ರನ್ವಯ ಜಿಲ್ಲಾ ಪಂಚಾಯತಿಯ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು ಕ್ರಮ ಜರುಗಿಸುವುದು. ಬಿಡುಗಡೆಯಾದ ಅನುದಾನವನ್ನು ತಡ ಮಾಡದೇ ಕಾರ್ಯಕ್ರಮಗಳ ಅನಿಷ್ಠಾನಕ್ಕೆ ಬಳಸಲು ಕ್ರಮವಹಿಸುವಂತೆ ಸೂಚಿಸಿದೆ.

ಈ ಅನುದಾನವನ್ನು ಜಿಲ್ಲಾ ಪಂಚಾಯತಿಗಳ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು ಸದರಿ ಲೆಕ್ಕ ಶೀರ್ಷಿಕೆಯಡಿ ಗ್ರ್ಯಾಂಟ್-ಇನ್-ಏಡ್ ಬಿಲ್ಲುಗಳಲ್ಲಿ ಸಲ್ಲಿಸಿ ನಗದೀಕರಿಸಿಕೊಳ್ಳುವುದು. ವೋಚರ್ ಸಂಖ್ಯೆಮತ್ತು ಹಣ ಪಡೆದ ದಿನಾಂಕವನ್ನು ಸರ್ಕಾರಕ್ಕೆ ತಿಳಿಸತಕ್ಕದ್ದು.

ಸರ್ಕಾರದ ಆದೇಶವನ್ನು ಈ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ.ಗ್ರಾಅಪ/308/ಪಿಬಿಎಸ್/2006 ದಿನಾಂಕ: 16.06.2006 ರಲ್ಲಿ ಸಹಮತಿಸಿದಂತೆ, ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ಶಾಂತರಾಜ್**

ನಿರ್ದೇಶಕರು, ಸ್ವ ಉದ್ಯೋಗ ಕಾರ್ಯಕ್ರಮಗಳು ಹಾಗೂ ಪದನಿಮಿತ್ತ,
ಸರ್ಕಾರದ ಅಪರ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ

**ANNEXURE**

**G.O.NO.RDP:16:SGRY:2006, Bangalore Dated:19th June 2006**

Statement showing the balance of IInd instalment of State share of assisttance pertaining to the 2005-06 released during 2006-07 under SGRY being the 20% of ZP share under Head of Account 2505-06-196-6-04

(Rs. in lakhs)

| Sl. No. | District | Code No. | Funds proposed for released | Funds already released on 19.5.06 | Balance of funds now being released |
|---|---|---|---|---|---|
| 1. | Bagalkot | 461 | 16.798 | 15.830 | 0.968 |
| 2. | Bangalore (U) | 401 | 18.492 | 16.800 | 1.632 |
| 3. | Belgaum | 413 | 25.138 | 22.920 | 2.218 |
| 4. | Bijapur | 414 | 20.352 | 18.550 | 1.802 |
| 5. | Gadag | 462 | 13.002 | 12.040 | 0.962 |
| 6. | Haveri | 463 | 16.374 | 14.930 | 1.444 |
| 7. | Kodagu | 411 | 13.978 | 12.740 | 1.238 |
| 8. | Kolar | 404 | 41.908 | 38.200 | 3.708 |
| 9. | Koppal | 466 | 15.398 | 14.040 | 1.358 |
| 10. | Tumkur | 406 | 34.380 | 32.740 | 1.640 |
| 11. | U. Kannada | 416 | 18.164 | 16.550 | 1.614 |
| 12. | Udupi | 457 | 9.384 | 8.520 | 0.864 |
| | **Total** | | **243.368** | **223.92** | **19.448** |

**R. SHANTHARAJ**
Director
Self Employment Programmes & E/o.
Addl. Secretary to Government
Rural Development & Panchayat Raj Dept.

P.R. 1031

**ವಿಷಯ:** ಸಂಪೂರ್ಣ ಗ್ರಾಮೀಣ ರೋಜ್‌ಗಾರ್ ಯೋಜನೆಯಡಿ ಹೆಚ್ಚುವರಿಯಾಗಿ ಮೂರನೇ ಕಂತನ್ನು ಬಿಡುಗಡೆ ಮಾಡಲಾದ ಅನುದಾನಕ್ಕೆ ರಾಜ್ಯದ ಪಾಲಿನ ಅನುದಾನವನ್ನು ಜಿಲ್ಲಾ ಪಂಚಾಯತಿಗಳಿಗೆ ಶೇಕಡಾ 20ರ ಭಾಗಾಂಶವನ್ನು ಬಿಡುಗಡೆ ಮಾಡುವ ಬಗ್ಗೆ.

**ಉಲ್ಲೇಖ:**
1. ಕೇಂದ್ರ ಸರ್ಕಾರದ ಪತ್ರದ ಸಂಖ್ಯೆ:ವಿ.24015/12/2005/ಎಸ್‌ಜಿಆರ್‌ವೈ-II/ Sl.No.293 ದಿನಾಂಕ:30.3.2006.
2. ಸರ್ಕಾರದ ಆದೇಶ ಸಂಖ್ಯೆ.ಎಫ್‌ಡಿ.7.ಜೆಡ್‌ಪಿಎ.2003 ದಿನಾಂಕ:14.7.05
3. ಸರ್ಕಾರದ ಆದೇಶ ಸಂ. ಆರ್‌ಡಿಪಿ/16/ಎಸ್‌ಜಿಆರ್‌ವೈ/06 ದಿನಾಂಕ:19.5.06.

**ಪ್ರಸ್ತಾವನೆ:**

ಕೇಂದ್ರ ಸರ್ಕಾರವು ಸಂಪೂರ್ಣ ಗ್ರಾಮೀಣ ರೋಜ್‌ಗಾರ್ ಯೋಜನೆಯಡಿ, 2005-06ನೇ ಸಾಲಿಗೆ ಉಲ್ಲೇಖ (1)ರ ಪತ್ರದಲ್ಲಿ ಮೂರನೇ ಹೆಚ್ಚುವರಿ ಕಂತಿನ ಅನುದಾನವನ್ನು ರಾಜ್ಯದ ಜಿಲ್ಲಾ ಪಂಚಾಯತಿಗಳಿಗೆ ನೇರವಾಗಿ ಬಿಡುಗಡೆ ಮಾಡಿ, ರಾಜ್ಯದ ಪಾಲಿನ ಅನುದಾನವನ್ನು ಬಿಡುಗಡೆ ಮಾಡುವಂತೆ ಆದೇಶಿಸಿದೆ. 2005-06ನೇ ಸಾಲಿನಲ್ಲಿ ಆಡಳಿತಾತ್ಮಕ ತೊಂದರೆಯಿಂದ ರಾಜ್ಯದ ಪಾಲಿನ ಅನುದಾನವನ್ನು ಜಿಲ್ಲಾ ಪಂಚಾಯತಿಗಳಿಗೆ ಸಕಾಲಕ್ಕೆ ಬಿಡುಗಡೆ ಮಾಡಲು ಸಾಧ್ಯವಾಗಿರುವುದಿಲ್ಲ. ಆದ್ದರಿಂದ, ರಾಜ್ಯ ಸರ್ಕಾರವು 20 ಜಿಲ್ಲಾ ಪಂಚಾಯತಿಗಳ ತಾಲ್ಲೂಕು ಮತ್ತು ಗ್ರಾಮ ಪಂಚಾಯತ್‌ಗಳಿಗೆ ಹೆಚ್ಚುವರಿ ಮೂರನೇ ಕಂತಿನ ಶೇಕಡಾ 30 ಮತ್ತು ಶೇ.50ರ ಭಾಗಾಂಶದ ಒಟ್ಟು ರೂ.25621000/- (ರೂ.ಎರಡು ಕೋಟಿ ಐವತ್ತಾರು ಲಕ್ಷದ ಇಪ್ಪತ್ತೊಂದು ಸಾವಿರ ಮಾತ್ರ)ಗಳನ್ನು ಉಲ್ಲೇಖ(3)ರಲ್ಲಿ ಬಿಡುಗಡೆ ಮಾಡಲಾಗಿದೆ. ಪ್ರಸ್ತುತ ರಾಜ್ಯ ಸರ್ಕಾರವು 15 ಜಿಲ್ಲೆಗಳಿಗೆ, ಶೇಕಡಾ 20ರ ಭಾಗಾಂಶದ ಜಿಲ್ಲಾ ಪಂಚಾಯತಿ ಕಾರ್ಯಕ್ರಮಗಳಿಗಾಗಿ, ರೂ.43,61 ಲಕ್ಷಗಳನ್ನು (ರೂ.ನಲವತ್ತ ಮೂರು ಲಕ್ಷದ ಅರವತ್ತೊಂದು ಸಾವಿರ ಮಾತ್ರ) ಈಗ ಬಿಡುಗಡೆ ಮಾಡಲು ನಿರ್ಧರಿಸಿದೆ.

ಆದ್ದರಿಂದ ಈ ಕೆಳಕಂಡ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶದ ಸಂಖ್ಯೆ:ಗ್ರಾಅಪ.16. ಎಸ್‌ಜಿಆರ್‌ವೈ. 2006, ಬೆಂಗಳೂರು, ದಿನಾಂಕ: 19ನೇ ಜೂನ್ 2006**

ಪ್ರಸ್ತಾವನೆಯಲ್ಲಿ ವಿವರಿಸಿದಂತೆ, ಸಂಪೂರ್ಣ ಗ್ರಾಮೀಣ ರೋಜ್‌ಗಾರ್ ಯೋಜನೆಯ ಕಾರ್ಯಕ್ರಮಗಳ ಅನುಷ್ಠಾನಕ್ಕಾಗಿ 2005-06ನೇ ಸಾಲಿನಲ್ಲಿ ಬಾಕಿ ಇರುವ ರಾಜ್ಯದ ಪಾಲಿನ ಮೂರನೇ ಹೆಚ್ಚುವರಿ ಕಂತಿನ ಅನುದಾನವಾದ ರೂ.43.61 ಲಕ್ಷಗಳನ್ನು (ರೂ.ನಲವತ್ತ ಮೂರು ಲಕ್ಷದ ಅರವತ್ತೊಂದು ಸಾವಿರ ಮಾತ್ರ) ರಾಜ್ಯದ 15 ಜಿಲ್ಲೆಗಳಿಗೆ 2006-07ನೇ ಸಾಲಿನಲ್ಲಿ ಆಯವ್ಯಯದಲ್ಲಿ ಒದಗಿಸಲಾದ ಅನುದಾನದಿಂದ ಪ್ರತ್ಯೇಕವಾಗಿ ಜಿಲ್ಲಾ ಪಂಚಾಯತಿಗಳಿಗೆ ನಮೂದಿಸಲಾದ ಲೆಕ್ಕಶೀರ್ಷಿಕೆಯಲ್ಲಿ ಹಂಚಿಕೆಯಾದ ಅನುದಾನದಿಂದ, ಈ ಆದೇಶದ ಅನುಬಂಧದಲ್ಲಿ ನಮೂದಿಸಿರುವಂತೆ, ಬಿಡುಗಡೆ ಮಾಡಿದೆ.

ಸಂಪೂರ್ಣ ಗ್ರಾಮೀಣ ರೋಜ್‌ಗಾರ್ ಯೋಜನೆಗೆ ಈಗಾಗಲೇ 2005-06ನೇ ಸಾಲಿನಲ್ಲಿ ಕೇಂದ್ರ ಹಾಗೂ ರಾಜ್ಯ ಸರ್ಕಾರಗಳಿಂದ ತಿಳಿಸಿರುವಂತೆ, ಎಲ್ಲಾ ಷರತ್ತುಗಳು ಹಾಗೂ ಮಾರ್ಗಸೂಚಿಯ ನಿಯಮಗಳನ್ನು ಕಟ್ಟುನಿಟ್ಟಾಗಿ ಪಾಲಿಸತಕ್ಕದ್ದು. ಅನುದಾನವನ್ನು ಈ ಕೆಳಗೆ ನಮೂದಿಸಿದ ಜಿಲ್ಲಾ ಪಂಚಾಯಿತಿಗೆ ತೋರಿಸಿದ ಲೆಕ್ಕಶೀರ್ಷಿಕೆಯಡಿ ವೆಚ್ಚವನ್ನು ಭರಿಸತಕ್ಕದ್ದು ಹಾಗೂ ಸಂಬಂಧಪಟ್ಟ ಜಿಲ್ಲಾ ಪಂಚಾಯತಿಗಳಿಗೆ ಬಿಡುಗಡೆ ಮಾಡಲಾದ ಅನುದಾನವನ್ನು ಉಲ್ಲೇಖ (2)ರಲ್ಲಿ ಆರ್ಥಿಕ ಇಲಾಖೆಯವರು ಸೂಚಿಸಿದಂತೆ ಕ್ರಮ ಕೈಗೊಳ್ಳತಕ್ಕದ್ದು.

ಜಿಲ್ಲಾ ಪಂಚಾಯತಿ "2505-ಗ್ರಾಮೀಣ ಉದ್ಯೋಗ-60-ಇತರೆ ಕಾರ್ಯಕ್ರಮಗಳು-196 ಜಿಲ್ಲಾ ಪಂಚಾಯತಿಗಳಿಗೆ ಸಹಾಯ-6-ಜಿಲ್ಲಾ ಪಂಚಾಯತಿಗಳು-04-ಬ್ಲಾಕ್ ಅನುದಾನ ಸಂಪೂರ್ಣ ಗ್ರಾಮೀಣ ರೋಜ್‌ಗಾರ್ ಯೋಜನೆ (2505-60-196-6-04) 2006-07 (ಯೋಜನೆ)"

ಸರ್ಕಾರದ ಆದೇಶವನ್ನು ಈ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ.ಗ್ರಾಅಪ/308/ಪಿಬಿಎಸ್/2006 ದಿನಾಂಕ: 16.06.2006 ರಲ್ಲಿ ಸಹಮತಿಸಿದಂತೆ, ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್. ಶಾಂತರಾಜ್**
ನಿರ್ದೇಶಕರು, ಸ್ವ ಉದ್ಯೋಗ ಕಾರ್ಯಕ್ರಮಗಳು ಹಾಗೂ ಪದನಿಮಿತ್ತ,
ಸರ್ಕಾರದ ಅಪರ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ

**ANNEXURE**

**G.O.NO.RDP:16:SGRY:2006, Bangalore Dated:19th June 2006**

Statement showing the release of the additional of IIIrd instalment of State share pertaining to 2005-06 under SGRY during 2006-07 to Zilla Panchayats.

(Rs. in lakhs)

| Sl. No. | District | Object Code | Additional III instament funds released by GOI vide letter dt. 30.3.06 | State share proposed for releases as per column No.4 | Funds being released in this Order under Head of Account (2505-60-196-6-04)20% ZP share) |
|---|---|---|---|---|---|
| 1. | Bagalkot | 461 | 37.40 | 12.47 | 2.49 |
| 2. | Bangalore (U) | 401 | 39.82 | 13.27 | 2.65 |
| 3. | Belgaum | 413 | 54.12 | 18.04 | 3.61 |
| 4. | Bijapur | 414 | 43.82 | 14.61 | 2.92 |
| 5. | Gadag | 462 | 28.45 | 9.48 | 1.90 |
| 6. | Hassan | 410 | 49.93 | 16.64 | 3.33 |
| 7. | Haveri | 463 | 35.26 | 11.75 | 2.35 |
| 8. | Kodagu | 411 | 30.10 | 10.03 | 2.01 |

(Rs. in lakhs)

| Sl. No. | District | Object Code | Additional III instament funds released by GOI vide letter dt. 30.3.06 | State hare proposed for releases as per column No.4 | Funds being released in this Oder under Head of Account (2505-60-196-6-04)20% ZP share) |
|---|---|---|---|---|---|
| 9. | Kolar | 404 | 90.23 | 30.08 | 6.02 |
| 10. | Koppal | 466 | 33.15 | 11.05 | 2.21 |
| 11. | Mysore | 407 | 43.69 | 14.56 | 2.91 |
| 12. | Shimoga | 405 | 29.93 | 9.98 | 1.99 |
| 13. | Tumkur | 406 | 77.33 | 25.78 | 5.16 |
| 14. | U. Kannada | 416 | 39.11 | 13.04 | 2.61 |
| 15. | Udupi | 457 | 21.82 | 7.27 | 1.45 |
| | **Total** | | **654.16** | **218.06** | **43.61** |

**R. SHANTHARAJ**
Director
Self Employment Programmes & E/o.
Addl. Secretary to Government
Rural Development & Panchayat Raj Dept.

P.R. 1032

## ವಸತಿ ಸಚಿವಾಲಯ

**ವಿಷಯ:** ಕೊಪ್ಪಳ ಜಿಲ್ಲೆ ಗಂಗಾವತಿ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ.

**ಉಲ್ಲೇಖ:** ಸರ್ಕಾರದ ಆದೇಶ ಸಂ.ವಇ/42/ಹೆಚ್ಎಎಂ/1998, ದಿನಾಂಕ:10.4.2000.

**ಪ್ರಸ್ತಾವನೆ:**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಉಲ್ಲೇಖಿತ ಆದೇಶದನ್ವಯ ವಿಧಾನಸಭಾ ಕ್ಷೇತ್ರವಾರು ಪುನರ್ ರಚಿಸಲು ತೀರ್ಮಾನಿಸಿದ್ದು, ಕೊಪ್ಪಳ ಜಿಲ್ಲೆ, ಗಂಗಾವತಿ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ವಇ/24/ಹೆಚ್ಎಎಸ್ 2006, ಬೆಂಗಳೂರು, ದಿನಾಂಕ: 15ನೇ ಜೂನ್ 2006**

ಮೇಲ್ಕಂಡ ಸಂದರ್ಭದಲ್ಲಿ ಕೊಪ್ಪಳ ಜಿಲ್ಲೆ, ಗಂಗಾವತಿ ನಗರ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆಶ್ರಯ ಸಮಿತಿಯನ್ನು ಪುನರ್ ರಚಿಸಲಾಗಿದೆ.

1. ಶ್ರೀಮತಿ ಕವಿತಮ್ಮ, ಅಂಬೇಡ್ಕರ್ ನಗರ, ವಾರ್ಡ್ ನಂ.22, ಗಂಗಾವತಿ. — ಸದಸ್ಯರು
2. ಶ್ರೀ ಧನರಾಜ್, ಭಾರತ್ ಫ್ಲೋರ್ ಮಿಲ್, ವಾಲ್ಮೀಕಿ ವೃತ್ತ, ಗಂಗಾವತಿ. — ಸದಸ್ಯರು
3. ಶ್ರೀ ಮೆಹಬೂಬ್ ಚೌದರಿ, ಬಸವಣ್ಣ ವೃತ್ತ ಹತ್ತಿರ, ಗಂಗಾವತಿ. — ಸದಸ್ಯರು
4. ಶ್ರೀ ಎ.ವಿ. ಪಾಟೀಲ್, ಕಿಲ್ಲಾ ಏರಿಯಾ, ಗಂಗಾವತಿ. — ಸದಸ್ಯರು

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್. ಇಂದುಮತಿ**
ಪೀಠಾಧಿಕಾರಿ-2, ವಸತಿ ಇಲಾಖೆ.

ಪಿ.ಆರ್. 1035

**ವಿಷಯ:** ಕೊಡಗು ಜಿಲ್ಲೆ ಮಡಿಕೇರಿ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ.

**ಉಲ್ಲೇಖ:** ಸರ್ಕಾರದ ಆದೇಶ ಸಂ.ವಇ/42/ಹೆಚ್ಎಎಂ/1998, ದಿನಾಂಕ:10.4.2000.

**ಪ್ರಸ್ತಾವನೆ:**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಉಲ್ಲೇಖಿತ ಆದೇಶದನ್ವಯ ವಿಧಾನಸಭಾ ಕ್ಷೇತ್ರವಾರು ಪುನರ್ ರಚಿಸಲು ತೀರ್ಮಾನಿಸಿದ್ದು, ಕೊಡಗು ಜಿಲ್ಲೆ, ಮಡಿಕೇರಿ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ವಇ/05/ಹೆಚ್ಎಎಸ್ 2006, ಬೆಂಗಳೂರು, ದಿನಾಂಕ: 15ನೇ ಜೂನ್ 2006**

ಮೇಲ್ಕಂಡ ಸಂದರ್ಭದಲ್ಲಿ ಕೊಡಗು ಜಿಲ್ಲೆ, ಮಡಿಕೇರಿ ನಗರ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆಶ್ರಯ ಸಮಿತಿಯನ್ನು ಪುನರ್ ರಚಿಸಲಾಗಿದೆ.

1. ಶ್ರೀ ಹೆಚ್.ಕೆ. ವಿಜಯಕುಮಾರ್, ಬ್ಲಾಕ್ ನಂ.18, ಸುದರ್ಶನ ವೃತ್ತದ ಬಳಿ ಮಡಿಕೇರಿ, ಕೊಡಗು ಜಿಲ್ಲೆ. — ಸದಸ್ಯರು
2. ಶ್ರೀ ಬಿ.ಎಸ್. ಸುರೇಶ್ ಶ್ರೀನಿವಾಸ ಸೇಠ್, ಮಹದೇವ ಪೇಟೆ, ಮಡಿಕೇರಿ, ಕೊಡಗು ಜಿಲ್ಲೆ. — ಸದಸ್ಯರು

3. ಶ್ರೀ ಪಿ. ಅಜೀಜ್, ಸದಸ್ಯರು
ಬ್ಲಾಕ್ ನಂ.23, ಕೌಂಟಿ ಕ್ಲಬ್ ಹತ್ತಿರ, ಮಡಿಕೇರಿ, ಕೊಡಗು ಜಿಲ್ಲೆ.
4. ಶ್ರೀಮತಿ ಕಮಲ ಮುರುಗೇಶ ಸದಸ್ಯರು
ಬ್ರಾಹ್ಮಣರ ಬೀದಿ, ಮಡಿಕೇರಿ, ಕೊಡಗು ಜಿಲ್ಲೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
ಪಿ.ಆರ್. 1036 **ಎಸ್. ಇಂದುಮತಿ**
ಪೀಠಾಧಿಕಾರಿ-2, ವಸತಿ ಇಲಾಖೆ.

**ವಿಷಯ:** ಹಾವೇರಿ ಜಿಲ್ಲೆ ಹಿರೇಕೆರೂರು ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ.
**ಉಲ್ಲೇಖ:** ಸರ್ಕಾರದ ಆದೇಶ ಸಂ.ವಇ/42/ಹೆಚ್ಎಎಂ/1998, ದಿನಾಂಕ:10.4.2000.

**ಪ್ರಸ್ತಾವನೆ:**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಉಲ್ಲೇಖಿತ ಆದೇಶದನ್ವಯ ವಿಧಾನಸಭಾ ಕ್ಷೇತ್ರವಾರು ಪುನರ್ ರಚಿಸಲು ತೀರ್ಮಾನಿಸಿದ್ದು, ಹಾವೇರಿ ಜಿಲ್ಲೆ, ಹಿರೇಕೆರೂರು ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ವಇ/51/ಹೆಚ್ಎಎಸ್ 2006, ಬೆಂಗಳೂರು, ದಿನಾಂಕ: 15ನೇ ಜೂನ್ 2006**

ಮೇಲ್ಕಂಡ ಸಂದರ್ಭದಲ್ಲಿ ಹಾವೇರಿ ಜಿಲ್ಲೆ, ಹಿರೇಕೆರೂರು ನಗರ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆಶ್ರಯ ಸಮಿತಿಯನ್ನು ಪುನರ್ ರಚಿಸಲಾಗಿದೆ.

1. ಶ್ರೀ ಪ್ರಕಾಶ್ ಫಕೀರಪ್ಪ ಹಿತ್ಲಳ್ಳಿ ಸದಸ್ಯರು
ಹಿರೇಕೆರೂರು, ಹಾವೇರಿ ಜಿಲ್ಲೆ.
2. ಶ್ರೀ ರಾಮಪ್ಪ ಭರಮಪ್ಪ ಗುಡ್ಡಳ್ಳಿ ಸದಸ್ಯರು
ಹಿರೇಕೆರೂರು, ಹಾವೇರಿ ಜಿಲ್ಲೆ.
3. ಶ್ರೀ ಇಸೂಬ್‌ಸಾಬ್ ಮುನಾಪ್‌ಸಾಬ್ ಖತೀಬ್ ಸದಸ್ಯರು
ಹಿರೇಕೆರೂರು, ಹಾವೇರಿ ಜಿಲ್ಲೆ.
4. ಶ್ರೀಮತಿ ದುರ್ಗಮ್ಮ ತಿರುಕಪ್ಪ ತಿರುಕ್ಕಪ್ಪನವರ ಸದಸ್ಯರು
ಹಿರೇಕೆರೂರು, ಹಾವೇರಿ ಜಿಲ್ಲೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
ಪಿ.ಆರ್. 1037 **ಎಸ್. ಇಂದುಮತಿ**
ಪೀಠಾಧಿಕಾರಿ-2, ವಸತಿ ಇಲಾಖೆ.

**ವಿಷಯ:** ಗದಗ ಜಿಲ್ಲೆ ನರಗುಂದ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ.
**ಉಲ್ಲೇಖ:** ಸರ್ಕಾರದ ಆದೇಶ ಸಂ.ವಇ/42/ಹೆಚ್ಎಎಂ/1998, ದಿನಾಂಕ:10.4.2000.

**ಪ್ರಸ್ತಾವನೆ:**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಉಲ್ಲೇಖಿತ ಆದೇಶದನ್ವಯ ವಿಧಾನಸಭಾ ಕ್ಷೇತ್ರವಾರು ಪುನರ್ ರಚಿಸಲು ತೀರ್ಮಾನಿಸಿದ್ದು, ಗದಗ ಜಿಲ್ಲೆ, ನರಗುಂದ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ವಇ/08/ಹೆಚ್ಎಎಸ್ 2006, ಬೆಂಗಳೂರು, ದಿನಾಂಕ: 15ನೇ ಜೂನ್ 2006**

ಮೇಲ್ಕಂಡ ಸಂದರ್ಭದಲ್ಲಿ ಗದಗ ಜಿಲ್ಲೆ, ನರಗುಂದ ನಗರ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆಶ್ರಯ ಸಮಿತಿಯನ್ನು ಪುನರ್ ರಚಿಸಲಾಗಿದೆ.

1. ಶ್ರೀ ಗೌಡಪ್ಪಗೌಡ ಪಾಟೀಲ ಸದಸ್ಯರು
(ಸೋಮಾಪುರ) ನರಗುಂದ, ಗದಗ ಜಿಲ್ಲೆ.
2. ಶ್ರೀ ಸೈಯದ್ ಸಾಬ್ ಮುಕ್ತಸಾಬ ಬಿಜಲಿಖಾನ ಸದಸ್ಯರು
ಲೋಬಿಗಲ್ಲಿ, ನರಗುಂದ, ಗದಗ ಜಿಲ್ಲೆ.
3. ಶ್ರೀಮತಿ ಗಂಗವ್ವ ಕೋಂ ಯಲ್ಲಪ್ಪ ಗುಡದರಿ ಸದಸ್ಯರು
ಮೆಣಸಿನಕಾಯಿ ಓಣಿ, ನರಗುಂದ, ಗದಗ ಜಿಲ್ಲೆ.
4. ಶ್ರೀ ವಾಸಪ್ಪ ಜೋಗನ್ನವರ ಸದಸ್ಯರು
ಅಂಬೇಡ್ಕರ್ ನಗರ, ನರಗುಂದ, ಗದಗ ಜಿಲ್ಲೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
ಪಿ.ಆರ್. 1038 **ಎಸ್. ಇಂದುಮತಿ**
ಪೀಠಾಧಿಕಾರಿ-2, ವಸತಿ ಇಲಾಖೆ.

**FOREST, ENVIRONMENT & ECOLOGY SECRETARIAT**

**Sub:** Creation of Revolving Fund under JBIC Phase II of the Project.

**Read:**
1. G.O. No: FEE 279 FAP 2005, dated:23.5.2005.
2. The Principal Chief Conservator of Forests, Bangalore Letter No:A1/KSFMBC/CR-II/2005-06, dt:6.12.2005.

**Preamble:-**

In G.O. referred at (1) above, Administrative approval is accorded for imlementation of Japan Bank for International Co-operation assisted Karnataka Sustainable Forest Management and Biodiversity Conservation Project in the entire State of Karnataka at a total cost of Rs. 745.00 crores. Out of Rs. 745.00 crores. JBIC will give financial assistance to the tune of 613.266 crores supplemented by Rs. 131.734 crores of the State Government, over a period of 8 years commencing from 2005-06 to 2012-2013 subject to the certain conditions.

In the letter referred at (2) above, The Principal Chief Conservator of Forests, Bangalore has informed that the Karnataka Forest Department has been collecting revenue on account of sale of seedlings year after year. The average collection of revenue for the past 5 years on this account which is being credited under the budget head 0406-01-800-0-07 Other Receipts from the sale of seedlings is Rs. 200.00 lakhs per annum. Sufficient budget had not been provided for raising required seedlings whch has to be distributed to the farmers in the ensuing year, Farm Forestry is one of the major programmes of the Department for achieving the objective of 33% of the forest / tree coverage as prescribed by the National Forest Policy. Therefore Farm Forestry is the cheapest and effective means of achieving the target by distributing seedlngs to the public. In the hase 2 of the JBIC Project 7.6 crores of seedlings have to be distributed, the JBIC authorities have agreed to finance for the first two years and directed to constitute a revolving fund where the revenue generated from the first two years from sale of seedlings can be reutilised for rasing seedlings of the coming years.

The Principal Chief Conservator of Forests, Bangalore has also further stated that it is necessary to cadre a Seedings Raising Fund where a separate budget head has to be created out of the revenue realised from sale proceeds of the seedlings which can be transferred to this head and budget provided under this head can be exclusively utilized for raising eedlings for the ensuing year and also started that the State of Punjab and Haryana have issued Government Orders creating such fund, where JBIC has funded for the afforestation project and also requested for issue necessary Government Order early.

The proposal has been examined in consultation with Finance Department and the Government has decided to create a revolving fund. Hene the order.

**Government Order No: FEE 275 FAP 2004, Bangalore, Dated: 30th June 2006**

Government are pleased to create a revolving fund in public account as deposits head i.e., "8449-0-120-9-28-Project Director JBIC", for the purpose of raising seedling under JBIC Phase-II. The grants received from the JBIC project for the purpose shall be utilised for raising seedlings initially for two years and proeds received sale of seedlings shall be deposited in the revolving fund for future utilisation for raising seedlings in the coming years.

To ensure that objectives of the project are achieved fully cost of raising seedlings should be recovered. It is also instructed that the sale price adopted for the sale of seedlings under the JBIC is also adopted for sale of seedlings produced under other schemes of the State funds.

This order issues with the concurrence of the Finance Department vide ts Note No: FD 302 Exp-2/2006, dt: 3.6.2006.

By Order and in the name of the Governor of Karnataka,
**S.R. VATSALA**
Under Secretary to Government,
Forest, Environment & Ecology Department

P.R. 1047

**ಜಲಸಂಪನ್ಮೂಲ ಸಚಿವಾಲಯ**

**ಸರ್ಕಾರದ ಆದೇಶ ಸಂಖ್ಯೆ: ಸನೀಇ 23 ಸೇಇವಿ 2006, ಬೆಂಗಳೂರು, ದಿನಾಂಕ: 14ನೇ ಜುಲೈ 2006**

**ವಿಷಯ:** ಶ್ರೀ ಖಲೀಂ ಅಹಮದ್, ನಿವೃತ್ತ, ಕಾರ್ಯಪಾಲಕ ಇಂಜಿನಿಯರ್, ರವರ ವಿರುದ್ಧ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 214 ರಡಿ ಕ್ರಮ ಕೈಗೊಳ್ಳುವ ಬಗ್ಗೆ.

**ಪ್ರಸ್ತಾವನೆ:**

ಶ್ರೀ ಖಲೀಂ ಅಹಮದ್, ನಿವೃತ್ತ ಕಾರ್ಯಪಾಲಕ ಇಂಜಿನಿಯರ್, ರವರು ಸಣ್ಣ ನೀರಾವರಿ ವಿಭಾಗ, ಬಳ್ಳಾರಿ ಇಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾಗ 2005-06ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ 2702 ರಡಿ ರೂ.103.00 ಲಕ್ಷ ಅನುದಾನವನ್ನು ಅಂದಾಜು ಪತ್ರ ಇಲ್ಲದೆ ಪಾವತಿಸಿರುವುದು, 1999-2000 ರಿಂದ 2003-04ರ ಅವಧಿಯಲ್ಲಿ ವಿವಿಧ ಕಾಮಗಾರಿಗಳಿಗಾಗಿ ಒಟ್ಟು ರೂ.36.47 ಲಕ್ಷಗಳ ಕೊಟೇಷನ್‌ಗಳಿಗೆ ಅಧಿಕಾರ ವ್ಯಾಪ್ತಿ ಮೀರಿ ಮಂಜೂರಾತಿ ನೀಡಿರುವುದು ಹಾಗೂ ಇದೇ ಅವಧಿಯಲ್ಲಿ ಉಗ್ರಾಣ ಸಾಮಗ್ರಿಗಳ ಖರೀದಿಯ ಮಂಜೂರಾತಿಗಾಗಿ ರೂ.15,000/-ಗಳಿಗೂ ಮೀರಿದ 5 ಕೊಟೇಷನ್‌ಗಳಲ್ಲಿ ಒಟ್ಟು ರೂ.1.51 ಲಕ್ಷಗಳನ್ನು ಪಾವತಿ ಮಾಡುವುದರ ಮೂಲಕ ತೀವ್ರ ಸ್ವರೂಪದ ದುರ್ನಡತೆಯನ್ನು ಎಸಗಿರುವುದು ಸರ್ಕಾರದ ಗಮನಕ್ಕೆ ಬಂದಿರುವುದರಿಂದಲೂ,

ಮೇಲ್ಕಂಡ ದುರ್ನಡತೆಗಳಿಗಾಗಿ ಶ್ರೀ ಕೆ. ಖಲೀಂ ಅಹಮದ್ ನಿವೃತ್ತ ಕಾರ್ಯಪಾಲಕ ಇಂಜಿನಿಯರ್ ರವರ ವಿರುದ್ಧ ಇಲಾಖಾ ವಿಚಾರಣೆ ಪ್ರಾರಂಭಿಸಬೇಕೆಂದು ಸರ್ಕಾರ ಭಾವಿಸಿರುವುದರಿಂದಲೂ,

ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 1958ರ ನಿಯಮ 214ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಕೆ. ಖಲೀಂ ಅಹಮದ್, ನಿವೃತ್ತ, ಕಾರ್ಯಪಾಲಕ ಇಂಜಿನಿಯರ್, ಅವರ ವಿರುದ್ಧ ಮೇಲೆ ಹೇಳಿದ ಆರೋಪಗಳ ಕುರಿತು ಇಲಾಖಾ ವಿಚಾರಣೆ ನಡೆಸಬೇಕೆಂದು ಹಾಗೂ ಈ ವಿಚಾರಣೆಯಲ್ಲಿ ಕ್ರಮ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಯ ನಿಯಮ 11, 11-ಎರಲ್ಲಿ ನಿಗದಿಪಡಿಸಿರುವ ಕಾರ್ಯವಿಧಾನವನ್ನು ಅನುಸರಿಸಬೇಕೆಂದು ಈ ಮೂಲಕ ಆದೇಶಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ವಾಸುದೇವಮೂರ್ತಿ**

ಪಿ.ಆರ್. 1061

ಸರ್ಕಾರದ ಅಧೀನ ಕಾರ್ಯದರ್ಶಿ,

ಜಲಸಂಪನ್ಮೂಲ ಇಲಾಖೆ (ಸಣ್ಣ ನಿರಾವರಿ)

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ:** ಕರ್ನಾಟಕ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯ ಅನುಷ್ಠಾನದ ಮೇಲ್ವಿಚಾರಣೆ ಮತ್ತು ಪರಿಶೀಲನೆ ಮಾಡಲು ರಾಜ್ಯ ಉದ್ಯೋಗ ಖಾತರಿ ಪರಿಷತ್ತನ್ನು ರಚಿಸುವ ಬಗ್ಗೆ.

**ಉಲ್ಲೇಖ:** ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಅಧಿನಿಯಮ 2005.

**ಪ್ರಸ್ತಾವನೆ:**

ಭಾರತ ಸರ್ಕಾರವು ದೇಶದ ಗ್ರಾಮೀಣ ಜನರ ಬಡತನವನ್ನು ಕಡಿಮೆ ಮಾಡುವ ಮತ್ತು ಅವರಿಗೆ ಉದ್ಯೋಗಾವಕಾಶವನ್ನು ಸೃಜಿಸಿ ಅವರ ಜೀವನಕ್ಕೆ ಭದ್ರತೆಯನ್ನು ಒದಗಿಸುವ ಉದ್ದೇಶದಿಂದ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಅಧಿನಿಯಮನ್ನು ಅತೀ ಹಿಂದುಳಿದ 200 ಜಿಲ್ಲೆಗಳಲ್ಲಿ ದಿನಾಂಕ:2.2.2006 ರಿಂದ ಜಾರಿಗೊಳಿಸಲಾಗಿದೆ. ಈ ಪೈಕಿ ಕರ್ನಾಟಕ ರಾಜ್ಯದ ಬೀದರ್, ಚಿತ್ರದುರ್ಗ, ದಾವಣಗೆರೆ, ಗುಲ್ಬರ್ಗ ಮತ್ತು ರಾಯಚೂರು ಜಿಲ್ಲೆಗಳನ್ನು ಆಯ್ಕೆ ಮಾಡಲಾಗಿದೆ. ಅಧಿನಿಯಮದ 4ನೇ ಅಧ್ಯಾಯದ ಪ್ರಕರಣ 12ರಲ್ಲಿ ಸೂಚಿಸಿರುವಂತೆ ರಾಜ್ಯ ಸರ್ಕಾರವು ರೂಪಿಸಿರುವ ಕರ್ನಾಟಕ ರಾಜ್ಯ ಉದ್ಯೋಗ ಖಾತರಿ ಪರಿಷತ್ತು ನಿಯಮಗಳು-2006ರ ಪ್ರಕಾರ ರಾಜ್ಯ ಉದ್ಯೋಗ ಖಾಗರಿ ಯೋಜನೆಯ ಉಸ್ತುವಾರಿ ಮತ್ತು ಮೇಲ್ವಿಚಾರಣೆಗಾಗಿ ಒಂದು ಪರಿಷತ್ತನ್ನು ರಾಜ್ಯ ಮಟ್ಟದಲ್ಲಿ ರಚಿಸಬೇಕಾಗುತ್ತದೆ. ಅಧ್ಯಕ್ಷರು ಪಂಚಾಯತ್ ರಾಜ್ ಸಂಸ್ಥೆಗಳಿಂದ ಮತ್ತು ಕಾರ್ಮಿಕ ಸಂಘಗಳು ಹಾಗೂ ಸೌಲಭ್ಯ ವಂಚಿತರಾದ ಗುಂಪುಗಳಿಂದ 15 ಜನಗಳಿಗೆ ಮೀರದಂತೆ ನಾಮನಿರ್ದೇಶನ ಮಾಡಬೇಕಾಗುತ್ತದೆ. ಇದರಂತೆ, ರಾಜ್ಯ ಮಟ್ಟದಲ್ಲಿ ರಾಜ್ಯ ಉದ್ಯೋಗ ಖಾತರಿ ಪರಿಷತ್ತನ್ನು ರಚಿಸಲು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂ.ಗ್ರಾಅಪ.21.ಎಸ್‌ಇಪಿ:ಎನ್‌ಆರ್‌ಇ:05, ಬೆಂಗಳೂರು, ದಿನಾಂಕ: 30ನೇ ಜೂನ್ 2006**

ಪ್ರಸ್ತಾವನೆಯಲ್ಲಿ ವಿವರಿಸಿದಂತೆ ಕರ್ನಾಟಕ ಸರ್ಕಾರವು ಕೇಂದ್ರ ಸರ್ಕಾರದ ಅಧಿನಿಯಮದ ಅಧ್ಯಾಯ 4 ಪ್ರಕರಣ 12ರಂತೆ ಕರ್ನಾಟಕ ರಾಜ್ಯ ಉದ್ಯೋಗ ಖಾತರಿ ಪರಿಷತ್ತನ್ನು ಈ ಕೆಳಗಿನ ಅಧಿಕಾರಿ ಮತ್ತು ಅಧಿಕಾರೇತರ ಸದಸ್ಯರನ್ನು ರಚಿಸಲು ಹರ್ಷಿಸುತ್ತದೆ.

| | | |
|---|---|---|
| 01. | ಮಾನ್ಯ ಸಚಿವರು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ | ಅಧ್ಯಕ್ಷರು |
| 02. | ಅಭಿವೃದ್ಧಿ ಆಯುಕ್ತರು | ಉಪಾಧ್ಯಕ್ಷರು |
| 03. | ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿ, ಯೋಜನೆ ಮತ್ತು ಸಾಂಖ್ಯಿಕ ಇಲಾಖೆ | ಸದಸ್ಯರು |
| 04. | ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ | ಸದಸ್ಯರು |
| 05. | ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿ, ಆರ್ಥಿಕ ಇಲಾಖೆ | ಸದಸ್ಯರು |
| 06. | ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿ, ಜೀವಿಶಾಸ್ತ್ರ ಮತ್ತು ಪರಿಸರ ಇಲಾಖೆ | ಸದಸ್ಯರು |
| 07. | ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿ, ಲೋಕೋಪಯೋಗಿ ಇಲಾಖೆ | ಸದಸ್ಯರು |
| 08. | ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿ, (ಕೃಷಿ), ಕೃಷಿ ಮತ್ತು ತೋಟಗಾರಿಕೆ ಇಲಾಖೆ | ಸದಸ್ಯರು |
| 09. | ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿ, (ತೋಟಗಾರಿಕೆ) ಕೃಷಿ ಮತ್ತು ತೋಟಗಾರಿಕೆ ಇಲಾಖೆ | ಸದಸ್ಯರು |
| 10. | ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿ, ಜಲಸಪನ್ಮೂಲ ಇಲಾಖೆ | ಸದಸ್ಯರು |
| 11. | ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿ, ಸಣ್ಣ ನೀರಾವರಿ ಇಲಾಖೆ | ಸದಸ್ಯರು |
| 12. | ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿ, ಕಾರ್ಮಿಕ ಇಲಾಖೆ | ಸದಸ್ಯರು |
| 13. | ಕಾರ್ಯದರ್ಶಿ, ಸಂಪನ್ಮೂಲಗಳು, ಆರ್ಥಿಕ ಇಲಾಖೆ | ಸದಸ್ಯರು |
| 14. | ಕಾರ್ಯದರ್ಶಿ, ವೆಚ್ಚ, ಆರ್ಥಿಕ ಇಲಾಖೆ | ಸದಸ್ಯರು |
| 15. | ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ | ಸದಸ್ಯರು |
| 16. | ಆಯುಕ್ತರು/ನಿರ್ದೇಶಕರು, ಜಲಾನಯನ ಅಭಿವೃದ್ಧಿ ಇಲಾಖೆ | ಸದಸ್ಯರು |
| 17. | ಆಯುಕ್ತರು/ನಿರ್ದೇಶಕರು, ಕಾರ್ಮಿಕ ಇಲಾಖೆ | ಸದಸ್ಯರು |
| 18. | ಮುಖ್ಯ ಅಭಿಯಂತರರು, ಪಂಚಾಯತ್ ರಾಜ್ ಇಂಜಿನಿಯರಿಂಗ್ ಇಲಾಖೆ | ಸದಸ್ಯರು |
| 19. | ಪ್ರಧಾನ ಕಾರ್ಯದರ್ಶಿ / ಕಾರ್ಯದರ್ಶಿ, ಗ್ರಾಮೀಣ ಅಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ (ಉದ್ಯೋಗ ಖಾತರಿ ಯೋಜನೆಯ ಉಸ್ತುವಾರಿ ವಹಿಸಿಕೊಂಡಿರುವ) | ಸದಸ್ಯ ಕಾರ್ಯದರ್ಶಿ |

**ಈ ಕೆಳಗಿನವರು ರಾಜ್ಯ ಪರಿಷತ್ತಿನ ಅಧಿಕಾರೇತರ ಸದಸ್ಯರಾಗಿರುತ್ತಾರೆ.**

| | | |
|---|---|---|
| 01. | ಗ್ರಾಮ ಪಂಚಾತಿಯ ಐವರು ಅಧ್ಯಕ್ಷರು | ಸದಸ್ಯರು |
| 02. | ತಾಲ್ಲೂಕು ಪಂಚಾಯತಿಯ ಐವರು ಅಧ್ಯಕ್ಷರು | ಸದಸ್ಯರು |
| 03. | ಜಿಲ್ಲಾ ಪಂಚಾತಿಯ ಇಬ್ಬರು ಅಧ್ಯಕ್ಷರು | ಸದಸ್ಯರು |
| 04. | ಕಾರ್ಮಿಕ ಸಂಘಗಳು ಮತ್ತು ಸೌಲಭ್ಯ ವಂಚಿತ ಗುಂಪುಗಳಿಂದ ಮೂವರು ವ್ಯಕ್ತಿಗಳು | ಸದಸ್ಯರು |

**ಅಧಿಕಾರೇತರ ಸದಸ್ಯರ ಪದಾವಧಿ:**

1. ರಾಜ್ಯ ಪರಿಷತ್ತಿಗೆ ನಾಮ ನಿರ್ದೇಶನಗೊಂಡಿರುವ ಗ್ರಾಮ ಪಂಚಾಯತಿ ಅಧ್ಯಕ್ಷರು, ತಾಲ್ಲೂಕು ಪಂಚಾಯತಿ ಅಧ್ಯಕ್ಷರು ಹಾಗೂ ಜಿಲ್ಲಾ ಪಂಚಾಯತ್ ಅಧ್ಯಕ್ಷರು ಎರಡು ವರ್ಷಗಳ ಪದಾವಧಿಯನ್ನು ಹೊಂದಿರುತ್ತಾರೆ. ಪದನಾಮದ ಮೂಲಕ ನಾಮನಿರ್ದೇಶನ ಮಾಡಿದ್ದಲ್ಲಿ ಹುದ್ದೆಯ ಉತ್ತರಾಧಿಕಾರಿಯು ಉಳಿದ ಅವಧಿಗೆ ಸದಸ್ಯರಾಗುತ್ತಾರೆ.

2. ಕಾರ್ಮಿಕರು ಮತ್ತು ಅನಾನುಕೂಲಕ್ಕೊಳಗಾಗಿರುವ ಗುಂಪುಗಳ ಪ್ರತಿನಿಧಿಗಳ ನಾಮನಿರ್ದೇಶನ ಅವಧಿಯು ಎರಡು ವರ್ಷಗಳಾಗಿರುತ್ತದೆ. ನಾಮ ನಿರ್ದೇಶನವನ್ನು ಪದನಾಮದ ಮೂಲಕ ಮಾಡಿದ್ದಲ್ಲಿ ಹುದ್ದೆಯ ಉತ್ತರಾಧಿಕಾರಿಯು ಉಳಿದ ಅವಧಿಗೆ ಸದಸ್ಯರಾಗುತ್ತಾನೆ.

**ರಾಜ್ಯ ಉದ್ಯೋಗ ಖಾತರಿ ಪರಿಷತ್ತಿನ ಕರ್ತವ್ಯಗಳು ಮತ್ತು ಪ್ರಕಾರ್ಯಗಳು ಈ ಕೆಳಗಿನಂತಿವೆ:**

1. ಅಧಿನಿಯಮದ 4ನೇ ಪ್ರಕರಣದ ಅಡಿಯಲ್ಲಿ ಅಧಿಸೂಚಿಸಿರುವ ಕರ್ನಾಟಕ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯನ್ನು ನಿರ್ವಹಿಸುವುದು.
2. ಈ ಯೋಜನೆಗೆ ಮತ್ತು ರಾಜ್ಯದಲ್ಲಿ ಅದು ಅನುಷ್ಠಾನಕ್ಕೆ ಸಂಬಂಧಿಸಿದ ಎಲ್ಲ ವಿಷಯಗಳ ಬಗ್ಗೆ ರಾಜ್ಯ ಸರ್ಕಾರಕ್ಕೆ ಸಲಹೆ ನೀಡುವುದು.
3. ರಾಜ್ಯ ಉದ್ಯೋಗ ಖಾತರಿ ನಿಧಿಯನ್ನು ನಿರ್ವಹಿಸುವುದು.
4. ಪ್ರಧಾನ್ಯತೆಯುಳ್ಳ ಕೆಲಸಗಳನ್ನು ನಿರ್ಧರಿಸುವುದು.
5. ಕಾಲಕಾಲಕ್ಕೆ ಮೇಲ್ವಿಚಾರಣೆ ಮತ್ತು ಪರಿಹಾರ ವ್ಯವಸ್ಥೆಗಳ ಪರಿಶೀಲನೆ ಮಾಡುವುದು ಮತ್ತು ಸುಧಾರಣಾ ಕ್ರಮಗಳನ್ನು ಶಿಫಾರಸ್ಸು ಮಾಡುವುದು.
6. ಈ ಅಧಿನಿಯಮ ಮತ್ತು ಅದರಡಿಯಲ್ಲಿನ ಯೋಜನೆಯ ಬಗ್ಗೆ ಮಾಹಿತಿಯನ್ನು ಅತ್ಯಂತ ವ್ಯಾಪಕವಾಗಿ ಪ್ರಸಾರ ಮಾಡುವುದನ್ನು ಉತ್ತೇಜನಗೊಳಿಸುವುದು.
7. (1) ನೋಂದಾಯಿತ ಕಾರ್ಮಿಕರ, ಸರ್ಕಾರೇತರ ಸಂಸ್ಥೆಗಳ ಮತ್ತು ಸ್ವಸಹಾಯ ಗುಂಪುಗಳನ್ನೊಳಗೊಂಡ ಪಾಲುಗಾರರು ಹಾಗೂ ಈ ಅಧಿನಿಯಮವನ್ನು ಅನುಷ್ಠಾನಗೊಳಿಸುವ ಪ್ರಮುಖ ವ್ಯಕ್ತಿಗಳಿಗೆ:
   (2) ಪಂಚಾಯತ್ ರಾಜ್ ಸಂಸ್ಥೆಗಳು, ಸ್ವಸಹಾಯ ಗುಂಪುಗಳು, ಸರ್ಕಾರೇತರ ಸಂಸ್ಥೆಗಳ ಸದಸ್ಯರುಗಳಿಂದ ಮುಖ್ಯಪಾಲುದಾರರು, ಅಂಚೆ ಕಛೇರಿ ಸಿಬ್ಬಂದಿ, ಬ್ಯಾಂಕಿಂಗ್ ವಿಮೆ ಲೆಕ್ಕಪರಿಶೋಧಕರುಗಳಂತ ಬೆಂಬಲ ಸೇವಾ ಗುಂಪುಗಳು, ಸಂಘಟಿತ ಮತ್ತು ಅಸಂಘಟಿತ ಕೃಷಿ ಕಾರ್ಮಿಕರು, ಅಂಗವಿಕಲ ವ್ಯಕ್ತಿಗಳು, ಮಹಿಳೆಯರು, ಸಮಾಜದ ಸಮಾಜಿಕ, ದುರ್ಬಲ ವರ್ಗಗಳು, ಮುಖ್ಯವಾಗಿ ಪರಿಶಿಷ್ಟ ಜಾತಿಗಳು ಮತ್ತು ಪರಿಶಿಷ್ಟ ಪಂಗಡಗಳಿಗೆ ತರಬೇತಿಗಾಗಿ ಅನುಕೂಲ ಕಲ್ಪಿಸುವುದು, ಸಂಘಟಿಸುವುದು ಮತ್ತು ಸಮನ್ವಯಗೊಳಿಸುವುದು.
8. ರಾಜ್ಯದಲ್ಲಿ ಅಧಿನಿಯಮ ಮತ್ತು ಯೋಜನೆಯನ್ನು ಅನುಷ್ಠಾನಗೊಳಿಸುವುದು ಮತ್ತು ಕೇಂದ್ರ ಪರಿಷತ್ತಿನೊಡನೆ ಅಂಥ ಅನುಷ್ಠಾನವನ್ನು ಸಮನ್ವಯಗೊಳಿಸುವುದು.
9. ರಾಜ್ಯ ಸರ್ಕಾರವು ರಾಜ್ಯ ವಿಧಾನ ಮಂಡಲದ ಮುಂದೆ ಮಂಡಿಸಬೇಕಾದ ವಾರ್ಷಿಕ ವರದಿಯನ್ನು ಸಿದ್ಧಪಡಿಸುವುದು.
10. ಅನುಷ್ಠಾನದ ಪ್ರಕ್ರಿಯೆಯನ್ನು ಮತ್ತು ಪರಿಯೋಜನೆಯಡಿಯಲ್ಲಿ ಕೈಗೊಳ್ಳಲಾದ ಯೋಜನೆಗಳ ಸಾಮಾಜಿಕ ಪ್ರಯೋಜನಗಳನ್ನು ಸ್ವತಂತ್ರ ಅಧ್ಯಯನಗಳ ಮೂಲಕ ಮೌಲ್ಯನಿರ್ಧರಣೆ ಮಾಡುವುದು.
11. ರಾಷ್ಟ್ರೀಯ ಉದ್ಯೋಗ ಖಾತರಿ ಪರಿಷತ್ತು ಅಥವಾ ರಾಜ್ಯ ಸರ್ಕಾರ ಇದಕ್ಕೆ ವಹಿಸಬಹುದಾದ ಇತರ ಯಾವುದೇ ಪ್ರಕಾರ್ಯಗಳನ್ನು ನಿರ್ವಹಿಸುವುದು.

ಈ ಪರಿಷತ್ತಿಗೆ ತಗಲುವ ವೆಚ್ಚವನ್ನು ಕರ್ನಾಟಕ ರಾಜ್ಯ ಉದ್ಯೋಗ ಖಾತರಿ ನಿಧಿಯ ಆಡಳಿತಾತ್ಮಕ ವೆಚ್ಚದ ಭಾಗದಿಂದ ಭರಿಸತಕ್ಕದ್ದು.
ಇದು ಮುಂದಿನ ಆದೇಶದವರೆಗೂ ಜಾರಿಯಲ್ಲಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್. ಶಾಂತರಾಜ್**
ನಿರ್ದೇಶಕರು, ಸ್ವ ಉದ್ಯೋಗ ಕಾರ್ಯಕ್ರಮಗಳು ಹಾಗೂ
ಪದನಿಮಿತ್ತ ಸರ್ಕಾರದ ಅಪರ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

ಪಿ.ಆರ್. 1062

**ವಿಷಯ:** ಗ್ರಾಮಸ್ವರಾಜ್-ಕರ್ನಾಟಕ ಪಂಚಾಯತ್ ಸಬಲೀಕರಣ ಯೋಜನೆ (ವಿಶ್ವಬ್ಯಾಂಕ್ ನೆರವು) - ಹುದ್ದೆಗಳನ್ನು ಸೃಜಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ: ಆರ್‌ಡಿಪಿ/40/ಎಸ್‌ಜೆವೈ (ಐಎನ್‌ಎಫ್) 2001, ದಿನಾಂಕ: 6.10.05.
2. ಸರ್ಕಾರಿ ಆದೇಶ ಸಂಖ್ಯೆ: ಗ್ರಾಅಪ/40/ಎಸ್‌ಜೆವೈ (ಐಎನ್‌ಎಫ್) 2001, ದಿನಾಂಕ: 17.12.05.

**ಪ್ರಸ್ತಾವನೆ:**

ಉಲ್ಲೇಖ (1)ರಲ್ಲಿ ಹೇಳಿರುವ ಸರ್ಕಾರಿ ಆದೇಶದಲ್ಲಿ ವಿಶ್ವಬ್ಯಾಂಕ್ ನೆರವಿನ ಗ್ರಾಮ ಸ್ವರಾಜ್-ಕರ್ನಾಟಕ ಪಂಚಾಯತ್ ಸಬಲೀಕರಣ ಯೋಜನೆಯನ್ನು ಅನುಷ್ಠಾನಗೊಳಿಸಲು ಮಂಜೂರಾತಿ ನೀಡಲಾಗಿದೆ. ಅಲ್ಲದೆ ಈ ಯೋಜನೆಯ ಅನುಷ್ಠಾನಕ್ಕಾಗಿ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯಲ್ಲಿ ಒಂದು ಯೋಜನಾ ವ್ಯವಸ್ಥಾಪಕ ಘಟಕವನ್ನು ಹಾಗೂ ಆರ್ಥಿಕ ಇಲಾಖೆಯಲ್ಲಿ ವಿಕೇಂದ್ರಿಕರಣ ವಿಶ್ಲೇಷಣಾ ಕೋಶವನ್ನು ಸ್ಥಾಪಿಸಲು ಮಂಜೂರಾತಿ ನೀಡಲಾಗಿದೆ. ಉಲ್ಲೇಖ (2)ರ ಆದೇಶದಲ್ಲಿ ಯೋಜನಾ ವ್ಯವಸ್ಥಾಪಕ ಘಟಕಕ್ಕೆ ಮುಖ್ಯಸ್ಥರು - ಗ್ರಾಮ ಸ್ವರಾಜ್ ಯೋಜನೆ, ಅಲ್ಲದೆ ಮುಖ್ಯಸ್ಥರು-ಕಾರ್ಯಾಚರಣೆ, ಮುಖ್ಯಸ್ಥರು-ಹಣಕಾಸು ಮತ್ತು ಸಂಗ್ರಹಣೆ, ಮುಖ್ಯಸ್ಥರು-ಮಾಹಿತಿ ವ್ಯವಸ್ಥೆ, ಮುಖ್ಯಸ್ಥರು-ಪರಿಸರ, ಮುಖ್ಯಸ್ಥರು-ವಿಶ್ಲೇಷಣೆ, ಅಧಿಕಾರಿಗಳ ಹುದ್ದೆಗಳನ್ನು ಸೃಜಿಸಲಾಗಿದೆ. ಈ ನಾಲ್ಕೂ ವಿಭಾಗಗಳಿಗೆ ನಾಲ್ಕು ಮುಖ್ಯಸ್ಥರುಗಳು ಇರುವುದರಿಂದ ಇವರುಗಳ ನಡುವೆ ಸಮನ್ವಯ ಕಾಪಾಡಲು ಹಾಗೂ ಈ ಯೋಜನೆಯನ್ನು ಸಮರ್ಪಕವಾಗಿ ಅನುಷ್ಠಾನಗೊಳಿಸಲು ಸರ್ಕಾರದ ಕಾರ್ಯದರ್ಶಿಗಳೇ ಗ್ರಾಮ ಸ್ವರಾಜ್ ಯೋಜನೆಯ ಮುಖ್ಯಸ್ಥರೆಂದು ಕಾರ್ಯನಿರ್ವಹಿಸುವುದು ಸೂಕ್ತವೆಂದು ಸರ್ಕಾರವು ತೀರ್ಮಾನಿಸಿದೆ. ಆದ್ದರಿಂದ, ಈ ಕೆಳಗಿನ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಗ್ರಾಅಪ 129 ಯೋಉಮಾ, ಬೆಂಗಳೂರು, ದಿನಾಂಕ: 5ನೇ ಜುಲೈ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಸರ್ಕಾರದ ಕಾರ್ಯದರ್ಶಿಗಳು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಕಾರ್ಯದರ್ಶಿ ಹುದ್ದೆಯ ಜೊತೆಗೆ ಮುಖ್ಯಸ್ಥರು - ಗ್ರಾಮ ಸ್ವರಾಜ್ ಯೋಜನೆ ಹುದ್ದೆಯ ಕರ್ತವ್ಯಗಳನ್ನು ನಿರ್ವಹಿಸಲು ಆದೇಶಿಸಿದೆ. ಸದರಿಯವರು ವಿಶ್ವಬ್ಯಾಂಕ್ ನೆರವಿನ ಗ್ರಾಮಸ್ವರಾಜ್-ಕರ್ನಾಟಕ ಪಂಚಾಯತ್ ಸಬಲೀಕರಣ ಯೋಜನೆಯ ಯೋಜನಾ ವ್ಯವಸ್ಥಾಪಕ ಘಟಕದ ಸಂಪೂರ್ಣ ಜವಾಬ್ದಾರಿಯನ್ನು ಮತ್ತು ಎಲ್ಲಾ ವಿಭಾಗಗಳ ಮಧ್ಯೆ ಸೂಕ್ತ ಸಮನ್ವಯ ಸಾಧಿಸಲು ಜವಾಬ್ದಾರರಾಗಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ.ಎಸ್. ಶಾಮಸುಂದರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

ಪಿ.ಆರ್. 1063

## ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ

**ವಿಷಯ:** ಶ್ರೀ ಬಸಪ್ಪ, ನಿವೃತ್ತ ಅಧೀಕ್ಷಕರು, ಶ್ರೀಮತಿ ಕಮಲಮ್ಮ, ಉಪ ಅಧೀಕ್ಷಕರು, ಶ್ರೀಮತಿ ರಾಧಾಬಾಯಿ, ಸಮಾಜ ವಿಷಯ ಪರಿಶೀಲಕರು ಮತ್ತು ಶ್ರೀ ಅಂಬಾದಾಸ್ ಗೃಹಪಾಲಕ ಇವರುಗಳ ವಿರುದ್ಧದ ಶಿಸ್ತಿನ ಕ್ರಮ ಕುರಿತು.

**ಓದಲಾಗಿದೆ:**

1. ಜಂಟಿ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬೆಂಗಳೂರು ಇವರ ಪತ್ರ ಸಂ: ಮಮಅಇ : ನಿಸಿಶಿಅ 4:99-2000 ದಿ:28.12.1999.
2. ಸರ್ಕಾರದ ಪತ್ರ ಸಂ:ಮಮಇ 236 ಎಸ್‌ಜೆಡಿ 98, ದಿನಾಂಕ:22.3.2000.
3. ನಿರ್ದೇಶಕರು ಹಾಗೂ ಶಿಸ್ತು ಪ್ರಾಧಿಕಾರಿಗಳು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಇವರ ನೋಟಿಸ್ ಸಂ:ಮಮಅಇ: ನಿಸಿಶಿಅ:4. 99-2000 ದಿ:19.5.2000
4. ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಇವರ ಆದೇಶ ಸಂ:ಮಮಅಇ: ನಿಸಿಶಿಅ:4:99-2000 ದಿ:5.8.2000
5. ವಿಚಾರಣಾ ವರದಿ ಸಂ: ಮಮಅಇ:ಸಿಬ್ಬಂದಿ: ಶಿಕ್ರಮ:2002-03/1227 ದಿ:15.6.2002
6. ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಇವರ ಆದೇಶ ಸಂ:ಮಮಅಇ/ನಿಸಿಶಿಅ. 4 99-2000 ದಿ:10.2.2003
7. ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಇವರ ಪತ್ರ ಸಂ:ಮಮಅಇ:ನಿಸಿಶಿಅ:4 99-2000. ದಿ:17.12.2003.
8. ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂ:ಪಿಎಸ್‌ಸಿ 107 ನಿಎನ್‌ಎಸ್ 2005. ದಿ:6.5.2006.

**ಪ್ರಸ್ತಾವನೆ**

ಮೇಲೆ ಕ್ರ.ಸಂ. (1) ರಲ್ಲಿ ಓದಲಾದ ಪತ್ರದಲ್ಲಿ, ಸರ್ಕಾರಿ ಬಾಲಕರ ಬಾಲಮಂದಿರ, ಗುಲಬರ್ಗಾ, ಇಲ್ಲಿ ಕಾರ್ಯನಿರ್ವಹಿಸುತ್ತಿರುವ ಶ್ರೀ ಗೋಪಾಲ, ರಕ್ಷಕರು ಸಂಸ್ಥೆಯ ನಿವಾಸಿಗಳಾದ ಆನಂದ, ತಂದೆ ಗಣಪತಿ ಮತ್ತು ಬಸವರಾಜು ತಂದೆ ಅರ್ಜುನ ಇವರಿಬ್ಬರು ಒಳಗೊಂಡಂತೆ 80 ನಿವಾಸಿಗಳನ್ನು ಸಂಸ್ಥೆಯಿಂದ ಒಂದು ಕಿ.ಮೀ. ದೂರದಲ್ಲಿರುವ ಭೀಮಾ ಫಿಲ್ಟರ್ ಬೆಡ್‌ಗೆ ಸ್ನಾನ ಮತ್ತು ಬಟ್ಟೆ ಸ್ವಚ್ಛತೆಗಾಗಿ ಕರೆದುಕೊಂಡು ಹೋಗಿದ್ದು, ಅಲ್ಲಿಂದ ಹಿಂದಿರುಗಿ ಬರುವಾಗ ಮಧ್ಯಾಹ್ನ ಸುಮಾರು 12.00 ಗಂಟೆಯಲ್ಲಿ ಸದರಿ ಆನಂದ ಮತ್ತು ಬಸವರಾಜ ಇವರಿಬ್ಬರೂ ದಾರಿ ಪಕ್ಕದಲ್ಲಿದ್ದ ನೀರಿನ ಹೊಂಡಕ್ಕೆ ಕಾಲು ಜಾರಿ ಬಿದ್ದು ನೀರಿನಲ್ಲಿ ಮುಳುಗಿ ಮರಣ ಹೊಂದಿರುವರೆಂದು ಮತ್ತು ಈ ಘಟನೆಗೆ ಶ್ರೀ ಗೋಪಾಲ್, ರಕ್ಷಕ ಇವರೇ ಹೊಣೆಗಾರರೆಂದು ಗುರುತಿಸಿ ಇವರ ವಿರುದ್ಧ ಶಿಸ್ತು ಕ್ರಮ ಜರುಗಿಸಿ, ಸಹಾಯಕ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಗುಲಬರ್ಗಾ ಇವರು ದಂಡನೆ ವಿಧಿಸಿರುವರೆಂದು ಜಂಟಿ ನಿರ್ದೇಶಕರು ತಿಳಿಸಿರುತ್ತಾರೆ. 80 ಮಂದಿ ನಿವಾಸಿಗಳನ್ನು ಒಬ್ಬ ರಕ್ಷಕನ ಬೆಂಗಾವಲಿನ ಉಸ್ತುವಾರಿಗೆ ಬಿಟ್ಟ ಅಧೀಕ್ಷಕರ ಬೇಜವಾಬ್ದಾರಿಯನ್ನು ಗಂಭೀರವಾಗಿ ಪರಿಗಣಿಸಿ, ಸದರಿ ಘಟನೆಗೆ ಸಂಸ್ಥೆಯ ಅಧೀಕ್ಷಕರಾದ ಶ್ರೀ ಬಸಪ್ಪ, ಶ್ರೀಮತಿ ಕಮಲಮ್ಮ, ಉಪ ಅಧೀಕ್ಷಕರು, ಶ್ರೀ ಅಂಬಾದಾಸ್, ಗೃಹಪಾಲಕರು ಮತ್ತು ಶ್ರೀಮತಿ ರಾಧಾಬಾಯಿ, ಸಮಾಜ ವಿಷಯ ಪರಿಶೀಲಕರು, ಇವರುಗಳೂ ಸಹ ಘಟನೆ ನಡೆದ ದಿನದಂದು, ಕಚೇರಿಯಲ್ಲಿ ಹಾಜರಿದ್ದ ಪ್ರಯುಕ್ತ ಇವರುಗಳ ಬೇಜವಾಬ್ದಾರಿಯನ್ನೂ ಸಹ ಗಂಭೀರವಾಗಿ ಪರಿಗಣಿಸಿ, ಇವರುಗಳ ವಿರುದ್ಧ ಶಿಸ್ತು ಕ್ರಮ ತೆಗೆದುಕೊಳ್ಳಲು ನಿರ್ಣಯಿಸಿದ್ದು, ಶ್ರೀ ಬಸಪ್ಪ ಇವರು ದಿ:31.5.1999ರಂದು ಸರ್ಕಾರಿ ಸೇವೆಯಿಂದ ವಯೋನಿವೃತ್ತಿ ಹೊಂದಿರುವುದರಿಂದ ಕೆ.ಸಿ.ಎಸ್.ಆರ್ಸ್. ನಿಯಮ 214[ಬಿ][1]ರ ಪ್ರಕಾರ ಸರ್ಕಾರದ ಪೂರ್ವಾನುಮತಿಯನ್ನು ನೀಡುವಂತೆಯೂ ಸಹ ಕೋರಿರುತ್ತಾರೆ

ನಿರ್ದೇಶಕರ ಪ್ರಸ್ತಾವನೆಯನ್ನು ಪರಿಗಣಿಸಿ, ಮೇಲೆ ಕ್ರಮ ಸಂಖ್ಯೆ [2] ರಲ್ಲಿ ಓದಲಾದ ಸರ್ಕಾರದ ಪತ್ರದಲ್ಲಿ ಶ್ರೀ ಬಸಪ್ಪ, ಹಿಂದಿನ ಅಧೀಕ್ಷಕರು ಇವರ ವಿರುದ್ಧ ಶಿಸ್ತು ಜರುಗಿಸಲು ಕೆ.ಸಿ.ಎಸ್.ಆರ್ಸ್. ನಿಯಮ 214[ಬಿ][1]ರ ಪ್ರಕಾರ ಸರ್ಕಾರದ ಸಹಮತಿಯನ್ನು ನೀಡುತ್ತಾ, ಶ್ರೀಮತಿ ಕಮಲಮ್ಮ ಶ್ರೀ ಅಂಬಾದಾಸ್ ಮತ್ತು ಶ್ರೀಮತಿ ರಾಧಾಬಾಯಿ, ಇವರುಗಳನ್ನು ಒಳಗೊಂಡಂತೆ ಕರ್ನಾಟಕ ನಾಗರೀಕ ಸೇವಾ [ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು] ನಿಯಮಗಳು 1957ರ ನಿಯಮ 13 ರಡಿ [ನಿಯಮ 11 ಓದಿಕೊಂಡಂತೆ] ಹಾಗೂ ಕೆ.ಸಿ.ಎಸ್.ಆರ್ಸ್. ನಿಯಮ 214ರಡಿ ಜಂಟಿ ಇಲಾಖಾ ವಿಚಾರಣೆಯನ್ನು ನಡೆಸಲು, ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಇವರಿಗೆ ಅನುಮತಿ ನೀಡಲಾಗಿತ್ತು.

ನಿರ್ದೇಶಕರು ಹಾಗೂ ಶಿಸ್ತು ಪ್ರಾಧಿಕಾರಿಗಳು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಇವರು ಮೇಲೆ ಕ್ರ.ಸಂ: [3] ರಲ್ಲಿ ಓದಿರುವ ತಿಳುವಳಿಕೆ ಪತ್ರವನ್ನು ಸದರಿ 4 ಅಧಿಕಾರಿ:ನೌಕರರಿಗೆ ಜಾರಿ ಮಾಡಿದ್ದು. ಈ ಕೆಳಗೆ ಸೂಚಿಸಿದಂತೆ, ಆರೋಪವನ್ನು ಹೊರಿಸಲಾಗಿರುತ್ತದೆ.

ಶ್ರೀ ಬಸಪ್ಪ ಹಿಂದಿನ ಅಧೀಕ್ಷಕರು [ಹಾಲಿ ನಿವೃತ್ತಿ] , ಶ್ರೀಮತಿ ಕಮಲಮ್ಮ, ಉಪ ಅಧೀಕ್ಷಕರು, ಶ್ರೀಮತಿ ರಾಧಾಬಾಯಿ, ಸಮಾಜ ವಿಷಯ ಪರಿಶೀಲಕರು, ಶ್ರೀ ಅಂಬಾದಾಸ, ಗೃಹಪಾಲಕರು ಇವರುಗಳು ಸರ್ಕಾರಿ ಬಾಲಮಂದಿರ, ಗುಲಬರ್ಗಾ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ದಿ:14.8.1998 ರಂದು ಇವರೆಲ್ಲರೂ ಸಂಸ್ಥೆಗೆ ಹಾಜರಾಗಿ ಹಾಜರಾತಿ ವಹಿಯಲ್ಲಿ ಸಹಿ ಮಾಡಿದ್ದು, ಸಂಸ್ಥೆಯ ನಿವಾಸಿಗಳ ಬಗ್ಗೆ ತಳೆದಿದ್ದ ನಿರ್ಲಕ್ಷತೆಯಿಂದ ಸ್ನಾನ ಮಾಡಲು ಹೋದ ನಿವಾಸಿಗಳ ಪೈಕಿ ಆನಂದ ತಂದೆ ಗಣಪತಿ, ಬಸವರಾಜು ತಂದೆ ಅರ್ಜುನ ಇವರುಗಳ ನೀರಿನ ಹೊಂಡದಲ್ಲಿ ಮುಳುಗಿ ಬೆಳಿಗ್ಗೆ 11.00 ಗಂಟೆ ಸಮಯದಲ್ಲಿ ದುರ್ಮರಣ ಹೊಂದಲು ಕಾರಣರಾಗಿ ಈ ಕೆಳಕಂಡ ಶಿಕ್ಷಾರ್ಹ ಅಪರಾಧ ಎಸಗಿರುತ್ತಾರೆ.

ಶ್ರೀ ಬಸಪ್ಪ ಹಿಂದಿನ ಅಧೀಕ್ಷಕರು ಇವರು ದಿ:14.8.1998ರಂದು ಸಂಸ್ಥೆಗೆ ಹಾಜರಾಗಿ ವಹಿಯಲ್ಲಿ ರುಜು ಮಾಡಿದ್ದು, ಸಂಸ್ಥೆಗೆ ಹಾಜರಾದ ನಂತರ ನಿವಾಸಿಗಳ ಯೋಗಕ್ಷೇಮದ ಬಗ್ಗೆ ವಿಚಾರಣೆ ನಡೆಸದೆ ಹೊರಗೆ ಹೋಗಿದ್ದು, ಇವರ ಬೇಜವಾಬ್ದಾರಿ ನಡವಳಿಕೆಯಿಂದ ಸುಮಾರು 80 ನಿವಾಸಿಗಳನ್ನು ಶ್ರೀ ಗೋಪಾಲ ರಕ್ಷಕರ ಬೆಂಗಾವಲಿನಲ್ಲಿ ಭೀಮಾ ಫಿಲ್ಟರ್ ಬೆಡ್‌ನಲ್ಲಿ ಸ್ನಾನ ಮುಗಿಸಿ ಬರುವಾಗ ದಾರಿಯ ಪಕ್ಕದ ನೀರಿನ ಹೊಂಡದಲ್ಲಿ ಇಬ್ಬರು ನಿವಾಸಿಗಳಾದ ಆನಂದ ಮತ್ತು ಬಸವರಾಜು ಇವರು ಕಾಲು ಜಾರಿ ನೀರಿನಲ್ಲಿ ಮುಳುಗಿ ಬೆಳಗಿನ ಸಮಯ 11.00 ಗಂಟೆಯಲ್ಲಿ ದುರ್ಮರಣ ಹೊಂದಿರುತ್ತಾರೆ. ಶ್ರೀ ಬಸಪ್ಪ ಇವರು ಸಂಸ್ಥೆಗೆ ಹಾಜರಾದ ತಕ್ಷಣ ನಿವಾಸಿಗಳ ಬಗ್ಗೆ ವಿಚಾರಿಸಿ ಸಂಸ್ಥೆಯ ಸಿಬ್ಬಂದಿಗಳನ್ನು ನಿವಾಸಿಗಳ ಬೆಂಗಾವಲಿನ ಉಸ್ತುವಾರಿಗೆ ಕಳುಹಿಸಿದ್ದರೆ ಈ ಅನಾಹುತವನ್ನು ತಪ್ಪಿಸಬಹುದಾಗಿದ್ದು, ಸದರಿ ದಿನಾಂಕದಂದು ಜಿಲ್ಲಾಧಿಕಾರಿಗಳ ಕಚೇರಿಗೆ ಹೋದ ಬಗ್ಗೆ ಯಾವುದೇ ದಾಖಲೆ ಇರುವುದಿಲ್ಲವಾದ್ದರಿಂದ ಒಬ್ಬ ಜವಾಬ್ದಾರಿಯುತ ಕಚೇರಿ ಮುಖ್ಯಸ್ಥರಾಗಿದ್ದು ಇವರ ನಿರ್ಲಕ್ಷತನ, ನಿವಾಸಿಗಳ ಬಗೆಗಿನ ಇವರ ನಿಷ್ಕಾಳಜಿ, ಬೇಜವಾಬ್ದಾರಿ ಆಡಳಿತದಿಂದ ಅಮಾಯಕ ನಿವಾಸಿಗಳ ದುರ್ಮರಣಕ್ಕೆ ಇವರು ಕಾರಣರಾಗಿರುತ್ತಾರೆ.

ಶ್ರೀಮತಿ ಕಮಲಮ್ಮ, ಉಪ ಅಧೀಕ್ಷಕರು, ಇವರು ದಿ:3.3.92.ರಿಂದ ಬಾಲಕರ ಬಾಲಮಂದಿರ, ಗುಲಬರ್ಗಾ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ದಿ:14.8.1998ರಂದು ಸಂಸ್ಥೆಗೆ ಹಾಜರಾಗಿ ಹಾಜರಾತಿ ವಹಿಯಲ್ಲಿ ಸಹಿ ಮಾಡಿದ್ದು, ಸಂಸ್ಥೆಯಲ್ಲಿ ಇದ್ದರೂ ಸಹ ನಿವಾಸಿಗಳ ಯೋಗಕ್ಷೇಮದ ಬಗ್ಗೆ ಗಮನ ಹರಿಸದೇ ನಿರ್ಲಿಪ್ತರಾಗಿದ್ದು, 80 ಮಂದಿ ನಿವಾಸಿಗಳನ್ನು ಗೋಪಾಲ ಪಾವರ ರಕ್ಷಕರೊಬ್ಬರ ಬೆಂಗಾವಲಿನಲ್ಲಿ ನಿವಾಸಿಗಳು ಸ್ನಾನಕ್ಕೆ ಹೋದ ವಿಷಯದ ಅರಿವು ಇದ್ದರೂ ಸಹ ತಕ್ಷಣ ನಿವಾಸಿಗಳ ಬೆಂಗಾವಲಿಗೆ ತೆರಳದೆ ತೀವ್ರತರವಾದ ಕರ್ತವ್ಯ ಲೋಪವೆಸಗಿರುತ್ತಾರೆ. ನಿವಾಸಿಗಳ ಯೋಗಕ್ಷೇಮದ ಸಂಪೂರ್ಣ ಜವಾಬ್ದಾರಿ ಇದ್ದರೂ ಸಹ ನಿವಾಸಿಗಳ ರಕ್ಷಣೆಗೆ ಗಮನ ನೀಡದೆ ದಿ:14.8.1998ರಂದು ಇಬ್ಬರು ನಿವಾಸಿಗಳ ಆನಂದ ಮತ್ತು ಬಸವರಾಜ ಇವರು ನೀರಿನ ಹೊಂಡದಲ್ಲಿ ಮುಳುಗಿ ದುರ್ಮರಣ ಹೊಂದಲು ಇವರು ಹೊಣೆಗಾರರಾಗಿದ್ದು, ಇವರು ಎಚ್ಚರವಹಿಸಿದ್ದರೆ ಈ ಅನಾಹುತ ತಪ್ಪಿಸಬಹುದಾಗಿದ್ದು ಇವರ ಬೇಜವಾಬ್ದಾರಿ ನಿಷ್ಕಾಳಜಿ, ಆಲಕ್ಷತನದಿಂದ ನಿವಾಸಿಗಳ ದುರ್ಮರಣಕ್ಕೆ ಇವರು ಹೊಣೆಗಾರರಾಗಿರುತ್ತಾರೆ.

ಶ್ರೀಮತಿ ರಾಧಾಬಾಯಿ, ಸಮಾಜ ವಿಷಯ ಪರಿಶೀಲಕರು, ಇವರು ದಿ:20.4.1992ರಿಂದ ಬಾಲಮಂದಿರ, ಗುಲಬರ್ಗಾ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ದಿ:14.8.1998ರಂದು ಸಂಸ್ಥೆಗೆ ಹಾಜರಾಗಿ, ಹಾಜರಾತಿವಹಿಯಲ್ಲಿ ಸಹಿ ಮಾಡಿ ಸಂಸ್ಥೆಯಲ್ಲಿ ಇದ್ದರೂ ಸಹ ನಿವಾಸಿಗಳ ಇರುವಿಕೆ, ಅವರ ಯೋಗಕ್ಷೇಮದ ಬಗ್ಗೆ ಗಮನ ಹರಿಸದೆ ನಿರ್ಲಿಪ್ತರಾಗಿರುತ್ತಾರೆ. ಇವರ ಬೇಜವಾಬ್ದಾರಿ ಕರ್ತವ್ಯ ನಿರ್ಲಕ್ಷತೆಯಿಂದ ಸಂಸ್ಥೆಯ 80 ಮಂದಿ ನಿವಾಸಿಗಳು ಗೋಪಾಲ ಪಾವರ ರಕ್ಷಕರ ಬೆಂಗಾವಲಿನಲ್ಲಿ ಭೀಮಾ ಫಿಲ್ಟರ್ ಬೆಡ್‌ನಲ್ಲಿ ಸ್ನಾನ ಮಾಡಲು ಹೋಗಿ ಬರುವಾಗ ಸಂಸ್ಥೆಯ ನಿವಾಸಿಗಳಾದ ಆನಂದ ಮತ್ತು ಬಸವರಾಜು ನೀರಿನ ಹೊಂಡದಲ್ಲಿ ಮುಳುಗಿ ದುರ್ಮರಣ ಹೊಂದಲು ಕಾರಣರಾಗಿದ್ದು, ಇವರು ಒಬ್ಬ ಜವಾಬ್ದಾರಿಯುತ ನೌಕರರಾಗಿದ್ದು, ನಿವಾಸಿಗಳ ಬೆಂಗಾವಲಿಗೆ ಹೋಗಿದ್ದರೆ. ಈ ದುರ್ಘಟನೆಯನ್ನು ತಪ್ಪಿಸಬಹುದಾಗಿದ್ದು, ಕರ್ತವ್ಯ ನಿರ್ಲಕ್ಷತನ ನಿವಾಸಿಗಳ ಬಗ್ಗೆ ಇವರಿಗಿದ್ದ ನಿಷ್ಕಾಳಜಿಯಿಂದ ಸಂಸ್ಥೆಯ ನಿವಾಸಿಗಳಾದ ಆನಂದ ಮತ್ತು ಬಸವರಾಜು ಇವರ ದುರ್ಮರಣಕ್ಕೆ ಹೊಣೆಗಾರರಾಗಿರುತ್ತಾರೆ.

ಶ್ರೀ ಅಂಬಾದಾಸ್, ಗೃಹಪಾಲಕ ಇವರು ದಿ:16.7.1993ರಿಂದ ಬಾಲಕರ ಬಾಲಮಂದಿರ, ಗುಲಬರ್ಗಾ ಇಲ್ಲಿ ಕರ್ತವ್ಯನಿರ್ವಹಿಸುತ್ತಿದ್ದು, ಮಕ್ಕಳ ಸ್ವಚ್ಛತೆ, ಊಟದ ವ್ಯವಸ್ಥೆ, ನಿವಾಸಿಗಳ ಸ್ನಾನ ಮತ್ತು ಇತರೆ ಕೆಲಸ ಕಾರ್ಯದಲ್ಲಿ , ನಿವಾಸಿಗಳೊಂದಿಗೆ ನಿಕಟವಾಗಿ ಇರುವ ಬಗ್ಗೆ ಅಧೀಕ್ಷಕರು ದಿ:11.11.1994, ಮತ್ತು ದಿ:22.11.1996ರ ಸಿಬ್ಬಂದಿ ಸಭೆಯ ನಡವಳಿಯಲ್ಲಿ ಪ್ರಸ್ತಾಪಿಸಲಾಗಿರುತ್ತದೆ. ದಿ:14.8.1998 ರಂದು ಕಚೇರಿಗೆ ಬಂದು ಸಿಬ್ಬಂದಿ ಹಾಜರಾತಿ ವಹಿಯಲ್ಲಿ ಸಹಿ ಮಾಡಿದ್ದು ನಂತರ ಸಂಸ್ಥೆಯಿಂದ ಹೊರಗಡೆ ಹೋಗಿದ್ದು, ಸಂಸ್ಥೆಗೆ ಹಾಜರಾಗಿದ್ದರು ಸಹ ನಿವಾಸುಗಳ ಯೋಗಕ್ಷೇಮ ಹಾಗೂ ಸ್ನಾನ ಮಾಡಲು ನಿವಾಸಿಗಳು ರಕ್ಷಕರ ಬೆಂಗಾವಲಿನಲ್ಲಿ ಭೀಮಾ ಫಿಲ್ಟರ್ ಬೆಡ್‌ಗೆ ಹೋಗಿರುವ ವಿಷಯದ ಅರಿವಿದ್ದರೂ ಸಹ ನಿವಾಸಿಗಳ ಬೆಂಗಾವಲಿಗೆ ತೆರಳದೆ ಕಚೇರಿ ಆದೇಶವನ್ನು ಉಲ್ಲಂಘಿಸಿ ತೀವ್ರತರವಾದ ಕರ್ತವ್ಯ ಲೋಪವೆಸಗಿದ್ದು, ಕರ್ತವ್ಯ ನಿರ್ಲಕ್ಷತೆ ಮತ್ತು ಬೇಜವಾಬ್ದಾರಿಯಿಂದ ದಿ:14.8.1998ರಂದು ಸಂಸ್ಥೆಯ ಇಬ್ಬರು ನಿವಾಸಿಗಳಾದ ಆನಂದ ಮತ್ತು ಬಸವರಾಜ ಇವರು ನೀರಿನ ಹೊಂಡದಲ್ಲಿ ಮುಳುಗಿ ದುರ್ಮರಣ ಹೊಂದಲು ಹೊಣೆಗಾರರಾಗಿರುತ್ತಾರೆ.

ಶ್ರೀ ಬಸಪ್ಪ ಅಧೀಕ್ಷಕರಾಗಿದ್ದು, ಸಂಸ್ಥೆಯ ಉಸ್ತುವಾರಿಯನ್ನು ಸರಿಯಾಗಿ ನಿರ್ವಹಿಸದೆ ಅಧೀನ ಸಿಬ್ಬಂದಿಗಳನ್ನು ನಿವಾಸಿಗಳ ಬೆಂಗಾವಲಿಗೆ ನಿಯೋಜಿಸದೇ ತೀವ್ರತರವಾದ ಲೋಪ ಎಸಗಿರುತ್ತಾರೆ. ಶ್ರೀಮತಿ ಕಮಲಮ್ಮ, ಉಪ ಅಧೀಕ್ಷಕರು ರಾಧಾಬಾಯಿ, ಸಮಾಜ ವಿಷಯ ಪರಿಶೀಲಕರು, ಶ್ರೀ ಅಂಬಾದಾಸ್, ಗೃಹಪಾಲಕ ಇವರುಗಳು ಸಂಸ್ಥೆಗೆ ಹಾಜರಾದ ತಕ್ಷಣ ನಿವಾಸಿಗಳ ಯೋಗಕ್ಷೇಮದ ಬಗ್ಗೆ ಕಾಳಜಿವಹಿಸಿ, ನಿವಾಸಿಗಳ ಬೆಂಗಾವಲಿಗೆ ಹೋಗಿದ್ದಲ್ಲಿ, ನಿವಾಸಿಗಳ ದುರ್ಮರಣವನ್ನು ತಪ್ಪಿಸಬಹುದಾಗಿದ್ದು, ಸುಧಾರಣಾ ಸಂಸ್ಥೆಯಲ್ಲಿ ಇವರುಗಳು ನಿವಾಸಿಗಳನ್ನು ಪೋಷಕರಂತೆ ಅಭಿರಕ್ಷಿಸಬೇಕಾಗಿದ್ದು, ಇವರುಗಳು ಬೇಜವಾಬ್ದಾರಿಯಿಂದ ವರ್ತಿಸಿ, ನಿಷ್ಕಾಳಜಿ, ನಿರ್ಲಕ್ಷ್ಯತನ ಮೈಗೊಡಿಸಿಕೊಂಡು ಇಬ್ಬರು ನಿವಾಸಿಗಳ ದುರ್ಮರಣಕ್ಕೆ ಕಾರಣರಾಗಿ, ತೀವ್ರತರವಾದ ಕರ್ತವ್ಯ ಲೋಪವೆಸಗಿರುತ್ತಾರೆ. ಇವರುಗಳ ವರ್ತನೆಯು ಕರ್ನಾಟಕ ನಾಗರೀಕ ಸೇವಾ [ನಡತೆ] ನಿಯಮಗಳು, 1966ರ ನಿಯಮ [3] ಕ್ಕೆ ವ್ಯತಿರಿಕ್ತವಾಗಿದ್ದು, ಇವರುಗಳು ಶಿಸ್ತುಕ್ರಮಕ್ಕೆ ಅರ್ಹರಾಗಿರುತ್ತಾರೆ.

ಆಪಾದಿತರು ನೀಡಿರುವ ವಿವರಣೆಯನ್ನು ಪರಿಗಣಿಸಿ ಮೇಲೆ ಕ್ರಮ ಸಂ: [4] ರಲ್ಲಿ ಓದಲಾದ ಆದೇಶದಲ್ಲಿ ,ಸಿಸಿಎ ನಿಯಮ 11 [2] ರನ್ವಯ ಆಪಾದಿತರ ವಿರುದ್ಧ ಆರೋಪಗಳ ಕುರಿತು ಜಂಟಿ ಇಲಾಖಾ ವಿಚಾರಣೆ ನಡೆಸಲು ಶ್ರೀಮತಿ ರತ್ನ ಬಿ. ಕಮಲದಾನಿ, ನಿರೂಪಣಾಧಿಕಾರಿಗಳು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಗುಲಬರ್ಗಾ ಇವರನ್ನು ವಿಚಾರಣಾಧಿಕಾರಿಯನ್ನಾಗಿ ಹಾಗೂ ಶಿಸ್ತು ಪ್ರಾಧೀಕಾರಗಳ ಪರವಾಗಿ ಪ್ರಕರಣವನ್ನು ಮಂಡಿಸಲು ಪ್ರತ್ಯೇಕ ಮಂಡನಾಧಿಕಾರಿಯನ್ನೂ ಸಹ ನೇಮಿಸಲಾಗಿರುತ್ತದೆ.

ಸದರಿ ವಿಚಾರಣಾಧಿಕಾರಿಗಳು ವಿಚಾರಣೆಯನ್ನು ನಡೆಸಿ ಮೇಲೆ ಕ್ರಮ ಸಂ: 5 ರಲ್ಲಿ ಓದಲಾದ ಪತ್ರದಲ್ಲಿ ವರದಿಯನ್ನು ಸಲ್ಲಿಸಿರುತ್ತಾರೆ. ಸದರಿ ವಿಚಾರಣಾಧಿಕಾರಿಗಳು, ನಿಯಮ 11ರಲ್ಲಿನ ಉಪನಿಧಿಗಳ ರೀತ್ಯಾ ವಿಚಾರಣೆ ನಡೆಸದೆ ಸಲ್ಲಿಸಿರುವ ವರದಿಯನ್ನು ಒಪ್ಪದೆ ನಿಯಮ 11 [ಎ] [1] ರೀತ್ಯಾ ಪ್ರಕರಣದ ಮುಂದುವರೆದ ವಿಚಾರಣೆ ನಡೆಸಲು ಮೇಲೆ ಕ್ರಮ ಸಂ:[6]ರಲ್ಲಿ ಓದಲಾದ ಆದೇಶದಲ್ಲಿ, ಶ್ರೀ ಸಂಗೊಳ್ಳಿ, ನಿವೃತ್ತ ನ್ಯಾಯಾಧೀಶರು ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿದೆ.

ಶ್ರೀ ಸಂಗೊಳ್ಳಿ, ವಿಚಾರಣಾಧಿಕಾರಿ ಇವರು ವಿಚಾರಣೆಯನ್ನು ನಿಯಮಾನುಸಾರ ಜರುಗಿಸಿ, ಸದರಿ ಆಪಾದಿತರ ವಿರುದ್ಧ ಆಪಾದನೆಗಳು ಸಾಬೀತಾಗಿವೆ ಎಂಬ ತಮ್ಮ ನಿರ್ಣಯದ ವರದಿಯನ್ನು ಸಲ್ಲಿಸಿರುತ್ತಾರೆ. ಸದರಿ ವಿಚಾರಣಾಧಿಕಾರಿಗಳು ವಿಚಾರಣಾ ವರದಿಯಲ್ಲಿ ಸಾಕ್ಷ್ಯ ದಾಖಲೆಗಳನ್ನು ವಿಮರ್ಶಿಸಿದ್ದು, ಆದೇಶ ಸಾಬೀತಾಗಿವೆ ಎಂಬ ನಿಲುವು ತಾಳಲು ಈ ಕೆಳಗೆ ಸೂಚಿಸಿರುವಂತೆ ಹೇಳಿರುತ್ತಾರೆ.

> ಹೀಗೆ ಇಲ್ಲಿ ಹಾಜರುಪಡಿಸಲಾದ ಲಿಖಿತ ಮತ್ತು ಮೌಖಿಕ ಸಾಕ್ಷ್ಯಗಳನ್ನು ಗಮನಿಸಿದಾಗ ಬಾಲಮಂದಿರದ ಮತ್ತು ಅಲ್ಲಿ ಬದುಕಲು, ಬದುಕುವುದನ್ನು ಕಲಿಯಲು ಬಂದ ಮಕ್ಕಳ ಬಗ್ಗೆ ಕಾನೂನು ಎಷ್ಟೋ ಕಾಳಜಿಯಿಂದ ನಿಯಮಗಳನ್ನು ರಚಿಸಿದಾಗ್ಯೂ,ಅವುಗಳನ್ನು ಜಾರಿಯಲ್ಲಿ ತರುವಲ್ಲಿ ಮತ್ತು ಅಂಥ ಮಕ್ಕಳ ಕಲ್ಯಾಣ ಮಾಡುವಲ್ಲಿ ಯಾವ ರೀತಿಯ ಉದಾಸೀನತೆ ಸಂಬಂಧಿಸಿದ ಅಧಿಕಾರಿಗಳಲ್ಲಿ ಮನೆ ಮಾಡಿದೆ ಅನ್ನುವುದು ಸ್ಪಷ್ಟ. ಕಾನೂನಿನ ಉದ್ದೇಶ ಎಷ್ಟೇ ಅಮೋಘವಾಗಿದ್ದಾಗ್ಯೂ ಅದನ್ನು ಅಳವಡಿಸುವ ಯಂತ್ರ ಸರಿ ಇಲ್ಲದಿದ್ದರೆ ಆ ಕಾನೂನಿನ ಪ್ರಯೋಜನ ಆಗದು. ಎರಡು ಮಕ್ಕಳ ಜೀವ ತೆಗೆದುಕೊಂಡ ಘಟನೆ ಇದಕ್ಕೆ ಸಾಕ್ಷ್ಯ ಆಪಾದಿತ ಬಸಪ್ಪ ಮರು ದಿವಸ ಸ್ವಾತಂತ್ರೋತ್ಸವ ಇದ್ದರೂ ಮತ್ತು ಅಂದು ಬಾಲಮಂದಿರದಲ್ಲಿ ಕಾರ್ಯಕ್ರಮ ಇದ್ದರೂ ಬೆಳಗಿನ 10 ಗಂಟೆಗೆ ಕಚೇರಿಗೆ ಬಂದಿಲ್ಲ, ಮಕ್ಕಳ ಸ್ನಾನ ಊಟ ಇತ್ಯಾದಿಗಳ ಬಗ್ಗೆ ಪರಿಶೀಲಿಸಿ ಯಾರು ಯಾರು ಏನು ಮಾಡಬೇಕೆಂಬ ಬಗ್ಗೆ ನಿರ್ದೇಶನ ಕೊಟ್ಟಿಲ್ಲ. ಹೀಗೆ 80 ಮಕ್ಕಳನ್ನು ಅಪಾಯಕಾರಿ ಸ್ಥಳಕ್ಕೆ ಸ್ನಾನ ಮಾಡಲು ಕರೆದುಕೊಂಡು ಹೋಗಲು ಈತನ ನಿರ್ಲಕ್ಷ್ಯವೇ ಕಾರಣ ಅನ್ನಬೇಕು. ಹಾಗೆಯೇ ಆ ಬಗ್ಗೆ ಹೊಣೆಗಾರರಾದ ಇತರ ಆಪಾದಿತರೂ ಕಾರಣ ಆಗುತ್ತಾರೆ. ಇಲ್ಲಿ ವೈಯಕ್ತಿಕ ಜವಾಬ್ದಾರಿಗಿಂತ ಸಾಮುಹಿಕ ಜವಾಬ್ದಾರಿ ಮಹತ್ವದ್ದಾಗಿರುತ್ತದೆ. ಒಬ್ಬರ ಮೇಲೆ ಒಬ್ಬರು ಹೊಣೆ ತಾವು ತಮ್ಮ ಕರ್ತವ್ಯದಿಂದ ಜಾರಿಕೊಳ್ಳಲಾರರು. ಇಂಥ ಬಾಲಮಂದಿರಗಳನ್ನು ನಡೆಸುವಲ್ಲಿ ಸಾಮೂಹಿಕ ಹೊಣೆಗಾರಿಕೆ

ಮೂಲಭೂತ ಆಧಾರವಾಗಿರುತ್ತದೆ. ಈ ಅವರೆಲ್ಲ ಆಪಾದಿತರು ತಮ್ಮ ಹೊಣೆಯನ್ನು ಮರೆತು ವರ್ತಿಸಿರುತ್ತಾರೆ. ಪರಿಣಾಮ ಎರಡು ಎಳೆಯ ಜೀವ ಹಾನಿ. ಅವರನ್ನು ವಾಪಸ್ಸು ತರಲಾಗದಿದ್ದಾಗ್ಯೂ ಮುಂದೆ ಅಂಥ ಘಟನೆ ನಡೆಯಬಾರದು. ನಿಯಮಗಳ ಪಾಲನೆ ಅಗತ್ಯ ಅವಶ್ಯ ನಿಯಮಗಳು ಕೇವಲ ಕಾಗದದಲ್ಲಿ ಉಳಿಯಬಾರದು. ಅವು ಜಾರಿಯಲ್ಲಿ ಬಂದು ಜೀವಂತವಾಗಿರಬೇಕು ಹಾಗೆ ಮಾಡುವುದು ಸಂಬಂಧಿಸಿದ ಅಧಿಕಾರಿಗಳ ಕರ್ತವ್ಯ. ಇಲ್ಲಿ ಈ ಎಲ್ಲ ಆಪಾದಿತರು ತಮ್ಮ ಕರ್ತವ್ಯ ನಿರ್ವಹಿಸುವಲ್ಲಿ ಲೋಪ ಎಸಗಿರುವುದು ಸ್ಪಷ್ಟವಾಗಿದೆ. ಕಾರಣ ಹೆಚ್ಚಿನ ಚರ್ಚೆ ಮಾಡದೆ ಈ ಅಂಶಗಳನ್ನು ಹೌದು ಎಂದು ಉತ್ತರಿಸಿ ಆರೋಪಿತರ ವಿರುದ್ಧ ಮಾಡಲಾಗಿರುವ ಆಪಾದನೆಗಳು ರುಜುವಾತಾಗಿವೆ ಎಂದು ನಿರ್ಣಯಿಸಿ ನನ್ನ ವರದಿಯನ್ನು ಸಲ್ಲಿಸುತ್ತೇನೆ.

ವಿಚಾರಣಾ ವರದಿಯ ಪ್ರತಿಗಳನ್ನು, ಸದರಿ ವರದಿಗಳ ಪ್ರತಿಗಳನ್ನು ಆಪಾದಿತರಿಗೆ ಜಾರಿ ಮಾಡಿ, ಅವರ ವಿವರಣೆಯನ್ನು ಪಡೆದು, ಒಬ್ಬ ಅಧಿಕಾರಿ ಪತ್ರಾಂಕಿತ ದರ್ಜೆಯವರಿದ್ದು, ಹಾಲಿ ನಿವೃತ್ತರಾಗಿರುವುದರಿಂದ ಸದರಿ ಪ್ರಕರಣದಲ್ಲಿ, ಅಂತಿಮ ನಿರ್ಣಯ ಕೈಗೊಂಡು ದಂಡನೆ ವಿಧಿಸುವ ಅಧಿಕಾರ ಸರ್ಕಾರಕ್ಕೆ ಇರುವುದರಿಂದ ವಿಚಾರಣೆಗೆ ಸಂಬಂಧಿಸಿದ ಮೂಲ ಕಡತವನ್ನು ಸಲ್ಲಿಸುತ್ತಾ ಸಿಸಿಎ ನಿಯಮ 8 ರಲ್ಲಿನ ಸೂಕ್ತ ದಂಡನೆ ವಿಧಿಸಿ ಆದೇಶಿಸುವಂತೆ ಮೇಲೆ ಕ್ರಮ ಸಂ: [7] ರಲ್ಲಿ ಓದಲಾದ ಪತ್ರದಲ್ಲಿ, ನಿರ್ದೇಶಕರು ಕೋರಿರುತ್ತಾರೆ.

ವಿಚಾರಣೆಯನ್ನು ನಿಯಮಾನುಸಾರ ನಡೆಸಿ, ಆರೋಪಿಗಳು ರಕ್ಷಣೆ ಮಾಡಿಕೊಳ್ಳಲು ಎಲ್ಲಾ ಅವಕಾಶವನ್ನು ಕಲ್ಪಿಸಿ ವಿಚಾರಣಾ ವರದಿ ನೀಡಿರುವುದನ್ನು ಹಾಗೂ ಆಪಾದಿತರು ಸಲ್ಲಿಸಿರುವ ವಿವರಣೆಯನ್ನು ಪರಿಗಣಿಸಿದ್ದು, ಸದರಿ ಆರೋಪಿಗಳಿಗೆ ವಿಧಿಸಲು ಉದ್ದೇಶಿಸಿರುವ ದಂಡನೆಯ ಕುರಿತು ಕರ್ನಾಟಕ ಲೋಕಸೇವಾ ಆಯೋಗದ ಅಭಿಪ್ರಾಯವನ್ನು ಕೋರಿದ್ದು, ಮೇಲೆ ಕ್ರಮ ಸಂ: [8]ರಲ್ಲಿ ಓದಲಾದ ಪತ್ರದಲ್ಲಿ ನೀಡಿರುವ ಸಹಮತಿಯನ್ನು ಪರಿಗಣಿಸಿ, ಈ ಕೆಳಗೆ ಸೂಚಿಸಿದಂತೆ ಆದೇಶಿಸಿಲಾಗಿದೆ.

**ಸರ್ಕಾರಿ ಆದೇಶ ಸಂ: ಮಮಇ/48/ಎಸ್‌ಜೆಡಿ/2004 ಬೆಂಗಳೂರು, ದಿನಾಂಕ: 23ನೇ ಜೂನ್ 2006**

ಶ್ರೀ ಸಂಗೊಳ್ಳಿ [ನಿವೃತ್ತಿ ನ್ಯಾಯಾಧೀಶರು] ವಿಚಾರಣಾಧಿಕಾರಿಗಳು, ಇವರು ವಿಚಾರಣೆ ನಡೆಸಿ ಸಲ್ಲಿಸಿರುವ ವರದಿಯನ್ನು ಸರ್ಕಾರ ಒಪ್ಪಿಕೊಂಡು ಈ ಕೆಳಗಿನಂತೆ ಆದೇಶಿಸಿದೆ:

1. ಶ್ರೀ ಬಸಪ್ಪ, ಇವರು ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯಲ್ಲಿ, ಅಧೀಕ್ಷಕರಾಗಿ ಕಾರ್ಯನಿರ್ವಹಿಸುತ್ತಿದ್ದು, ದಿ:31.5.1999 ರಂದು ಸೇವೆಯಿಂದ ವಯೋನಿವೃತ್ತಿ ಹೊಂದಿದ್ದು, ಕೆ.ಸಿ.ಎಸ್.ಆರ್ಸ್. ನಿಯಮ 214[ಬಿ][i]ರನ್ವಯ ಹೊರಿಸಲಾಗಿದ್ದ ಆಪಾದನೆಗಳು ಸಾಬೀತಾಗಿದ್ದು, ನಿಯಮ 214[1][ಎ] ರನ್ವಯ ಇವರ ಅಂಗೀಕಾರ ಅರ್ಹವಾದ ನಿವೃತ್ತಿ ವೇತನದ ಶೇ. 20ರಷ್ಟನ್ನು ಖಾಯಂ ಆಗಿ ಕಡಿತಗೊಳಿಸುವ ದಂಡನೆಯನ್ನು ವಿಧಿಸಲಾಗಿದೆ.

2. ಶ್ರೀಮತಿ ಕಮಲಮ್ಮ, ಉಪ ಅಧೀಕ್ಷಕರು, ಪ್ರಸ್ತುತ ಪ್ರಥಮ ದರ್ಜೆ ಸಹಾಯಕರು, ಸಮಗ್ರ ಶಿಶು ಅಭಿವೃದ್ಧಿ ಯೋಜನೆ[ನಗರ] ಗುಲಬರ್ಗಾ ಇವರನ್ನು ಕರ್ನಾಟಕ ನಾಗರೀಕ ಸೇವಾ [ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು] ನಿಯಮಗಳು 1957ರ ನಿಯಮ 8[viii] ರಲ್ಲಿ ನಿಗದಿಪಡಿಸಿರುವಂತೆ ಸೇವೆಯಿಂದ ವಜಾ ಮಾಡಿ ಆದೇಶಿಸಿದೆ.

3. ಶ್ರೀಮತಿ ರಾಧಾಬಾಯಿ, ಪ್ರಸ್ತುತ ಸಮಾಜ ವಿಷಯ ಪರಶೀಲಕರು, ರಾಜ್ಯ ಮಹಿಳಾ ನಿಲಯ, ಗುಲಬರ್ಗಾ ಇವರನ್ನು ಕರ್ನಾಟಕ ನಾಗರಿಕ ಸೇವಾ [ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು] ನಿಯಮಗಳು 1957ರ ನಿಯಮ 8[viii] ರಲ್ಲಿ ನಿಗದಿಪಡಿಸಿರುವಂತೆ ಸೇವೆಯಿಂದ ವಜಾ ಮಾಡಿ ಆದೇಶಿಸಿದೆ.

ಶ್ರೀ ಅಂಬಾದಾಸ್, ಪ್ರಸ್ತುತ ಗೃಹಪಾಲಕ, ಬಾಲಕರ ಬಾಲಮಂದಿರ, ಬೀದರ್, ಇವರನ್ನು ಕರ್ನಾಟಕ ನಾಗರೀಕ ಸೇವಾ [ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು] ನಿಯಮಗಳು 1957ರ ನಿಯಮ 8[viii] ರಲ್ಲಿ ನಿಗದಿಪಡಿಸಿರುವಂತೆ ಸೇವೆಯಿಂದ ವಜಾ ಮಾಡಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ವಿ. ಶಿವಕುಮಾರ್**

ಪಿ.ಆರ್.1014

ಸರ್ಕಾರದ ಅಧೀನ ಕಾರ್ಯದರ್ಶಿ-2,
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

## AGRICULTURE & HORTICULTURE SECRETARIAT

**SUB:** Approval for Implementation of the "New Centrally Sponsored Scheme on Micro Irrigation" under District Sector.

1. GOI letter No. 11-1 /2006-Hort, dated 25.1.2006.
2. GOI letter No. 20-12/2006-Hort, dated 23.3.2006.
3. GOI letter No. 20-12/2006- Hort dated 10.5.2006.
4. proceeding of the metting held under the Chairmanship of Additional Chief Secretary and Development Commissioner on 26.6.06.

**PREAMBLE:**

1. Government of India has accorded administrative approval for implementation of the "New Centrally Sponsored Scheme on Micro Irrigation" during 2005-06 and 2006-07 as per Government of India letter read at (1) above. The sharing pattern between Government of India and Government of Karnataka will be 80:20, respectively. An amount of Rs. 3584. 10 lakhs towards Central share has been released by Government of India directly to the Deputy Director of Horticulture (Zilla Panchayat) of 27 districts as per Government of India letter read at (2) above. As the administrative approval and the funds from Government of India have been received at the fag end of the financial year 2005-06, the scheme could not be implemented during that year. Government of India has revalidated for expenditure during 2006-07 as per its letter read at (3) above. It will be implemented during 2006-07 on Mission Mode.

2. The key features of Government of India scheme are that there are 3 components namely, Drip Irrigation, Sprinkler and Drip Demonstration. The subsidy will be 50% for drip irrigation and Sprinkler irrigation and 75% for drip demonstration for Horticulture crops.Assistance to farmers will be provided for covering a maximumarea of 5 hectares per beneficiary family.

3. The Department of Horticulture is already implementing a District sector scheme for Drip irrigation. Under this scheme till last year, the subsidy was 50% in the entire State and 100% in Bijapur district and Kolar district. The Deputy Chief Minister and the Minister for Finance, Government of Karnataka has announced in his budget speech 2006-07 at para 46 that in order to support cultivation of diversified Horticulture crops the scope of the ongoing Drip irrigation scheme will be expanded. In Kolar and Bijapur, the present scheme of providing 100% subsidy will continue. In the remaining districts the subsidy will be enhanced from 50% to 75% up to a limit of 2 hectares. For this purpose an amount of Rs. 4430.31 lakhs has been provided under the head of account 2401-00-108-2-30 under Zilla panchayat sector.

4. In order to take advantage of Government of India scheme and to comply to the enchancement of subsidy announced in the budget speech, the Department of Horticulture has formulated a proposal for merger of the district sector scheme with the New Centrally Sponosored Scheme on Micro Irrigation. The total cost of the scheme will be Rs. 6778.57 lakhs. Out of this Rs. 3584. 10 lakhs will be Government of India share and Rs. 3194.46 lakhs will be State share. The State share will comprise of matching contribution towards Central assistance and the differential amount towards the additional subsidy announced by the state for drip irrigation. For sprinkler irrigation the State share will comprise of matching contribution of 20% while for drip demonstration there will be no State contribution as per Government of India guidelines.

5. With regard to the area ceiling, the Government of India has fixed 5 hectares per beneficiary family while in the budget speech it has been announced that the subsidy at 75% will be provided up to a limit of 2 hectares. Hence in order to ensure that the farmers get benefit from both the sources. The maximum area limit may have to be fixed at 5 hectares while the subsidy at 75% may have to be restricted to 2 hectares and for the remaining area the subsidy may be given at 50%.

6. Government of India has already released its share directly to the Implementing Agency (IA) drawn by demand drafts in favour of the Deputy Directors of Horticulture (ZP) of 27 districts. This will be deposited in a Bank Account at district level already opened by the concerned Deputy Director of Horticulture, ZP in a Nationalised Bank. Now, state share is to be relesed and deposited to this Bank Account for maching the Government of India share. For this purpose the funds earmarked inthe district sector is to be drawn and deposited to the Bank Account, in order to implement the scheme on Mission Mode so that there will be smooth flow of funds.

7. The issue of merger and utilizing district sector funds for providing State share to the New Centrally Sponsored Scheme on Micro Irrigation was discussed in detail at high level meetings. As a consequence to the decision taken in the meeting of Assurance Committee held on 22.6.2006, a meeting was held under the Chairmanship of the Additional Chief Secretary & Development Commissioner on 26.6.2006. In the said meeting Principal Secretary (Horticulture), Principal Secretary, Rural Development and Panchayat Raj, Deputy Secretary, Finance and Director of Horticulture were present.It was decided to merge new centrally sponsored scheme on micro irrigation and the existing district sector schem for drip irrigation.This will be a district sector scheme to be implemented under Mission Mode. The matching State share to the scheme will be released by the Finance Department to the ZP and in turn from ZPs to the Deputy Directors of Horticulture (ZP) of concerned districts immediately. This State share will be drawn by a grant-in-aid- bill and it will be deposited to the bank account of National Horticulture Mission at district level into which Government of India share has been deposited.It will be utilized for implementation of the scheme by Deputy Directors of Horticulture, ZP. The Department of Horticulture and the Department of Rural Development and Panchayat Raj will be monitoring the over all implementation of the Scheme and it was decided to issue the Government Order. Hence, this order is issued as per the approved proceedings of the meeting held undfr the Chairmanship of Additional Chief Secretary and Development Commissioner on 26.6.2006 read at (3) above.

**Government Order No. AHD 31 HPP 2006 Bangalore, Dated: 29th June 2006**

Government is pleased to approve the Implementation of the "New Centrally Sponsored Scheme on Micro Irrigation" by merging it with the existing district sector scheme "Drip Irrigation- Special Subsidy for Horticultural Crops (2401-00-108-2-30)". This will be a new district sector scheme to be implemented undfr Mission Mode.

2. The sharing pattern under the scheme will be 80:20 between Government of India and Government of Karnataka. The total outlay for the scheme will be Rs. 6778.57 lakhs. Out of this, Rs. 3584.10 lakhs will be the Central share and Rs. 3194.46 lakhs will be the State share. The State share inciuded the State contribution to match the Government of India share and the State's commitment towards enhanced subsidy. The following are the components.

| Sl No | Component | Sharing Pattern (Rs. in laksh) | | |
|---|---|---|---|---|
| **1.** | **Drip Irrigation** | | | |
| | a) Bijapur and Kolar districts | 362.63 | 543.94 | 906.57 |
| | b) Remaining districts | 2955.85 | 2586.37 | 5542.22 |
| | **Subtotal** | **3318.48** | **3130.31** | **6448.79** |
| **2.** | **Sprinkler** | **256.62** | **64.16** | **320.78** |
| **3.** | **Drip Demonstration** | **9.00** | **-----** | **9.00** |
| | **Grand Total** | **3584.10** | **3194.46** | **6778.57** |

3. The subsidy under the new scheme will be as below;

**a) Drip Irrigation :** Subsidy will be provided at the rate of 75% all over the State and 100% in Bijapur and Kolar districts to all categories of farmers up to an extent of 2 hectares per beneficiary family.The subsidy will be 50% up to an extent between 2 ha. and 5 ha.

**b) Sprinkler Irrigation :** Subsidy will be provided at the rate of 50%all over the State. However, Sprinkler Irrigation will be applicable only for those crops where drip irrigation is uneconomical.

**c) Drip Demonstration:** Subsidy will be provided at the rate of 75%

4. The Director of Horticulture will issue detailed guidelines of implementation of the new scheme in tune with the guidelines issued by Government of India and the State Government.It would include the district wise physical and financial targets and maximum subsidy levels admissible based on the crop spacing and the extent of crop.The Director of Horticulture will be totally responsible for the implementation of the scheme by the Deputy Directors of Horticulture(ZP)

5. The Panchayat Raj Institutions (PRI's) should be involved in selecting the beneficiaries.

6. The matching State share to the will be released by the Finance Department to the ZP and in turn from ZPs to the Deputy Directors of Horticulture of concerned districts immediately. It will be drawn by a grant-in-aid bill and it will be deposited to the bank account of National Horticulture Mission at district level into which Government of India share has been deposited. It will be utilized for implementation of the scheme by Deputy Directors of Horticulture,ZP.

7. The New scheme will be implemented and monitored by a District Micro Irrigation Committee headed by Chief Executive Officer of the ZP.Its composition is as below;

| | | |
|---|---|---|
| 1. | Chief Executive Officer, Zilla Panchayat | Chairman |
| 2. | Representative of Lead Bank | Member |
| 3. | Water Resource Management expert from University of Agricultural Sciences /Regional Research Station/Krishi Vignana Kendra. | Member |
| 4. | One Representative from Farimers Group | Member |
| 5. | One Representative from Irrigation Association of Karnataka | Member |
| 6. | Deputy Director of Horticulture, ZP | Member Secretary |

8. The Department of Horticulture and the Department of Rural Development and Panchayat Raj will be monitoring and supervising the over all implementation of the Scheme.

9. This is issued in pursuance of the approved proccedings by the Additional Chief Secretary& Development Commissioner where in Finance Department and Department of Rural Development and Panchayat Raj were also present.

By Order and in the name of the Governor of Karnataka,

**N. MANJULA GEETHA**

P.R. 1028

Under Secretary to Government,

Agriculture& Horticulture Department.

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ:** 2006-07ನೇ ಸಾಲಿನಲ್ಲಿ ಸಂಪೂರ್ಣ ಗ್ರಾಮೀಣ ರೋಜ್‌ಗಾರ್ ಯೋಜನೆಯಡಿ ಕೇಂದ್ರ ಸರ್ಕಾರದ ಮೊದಲನೇ ಕಂತಿನ ಅನುದಾನಕ್ಕೆ ರಾಜ್ಯದ ಪಾಲಿನ ಅನುದಾನ (ಶೇ.20ರ, 30ರ ಹಾಗೂ 50ರ ಭಾಗಾಂಶ)ವನ್ನು ರಾಜ್ಯದ 22 ಜಿಲ್ಲೆಗಳಿಗೆ ಬಿಡುಗಡೆ ಮಾಡುತ್ತಿರುವ ಬಗ್ಗೆ.

**ಉಲ್ಲೇಖ:**
1. ಕೇಂದ್ರ ಸರ್ಕಾರದ ಪತ್ರದ ಸಂಖ್ಯೆ:ಜೆ.12022/1/2006 ಎಸ್‌ಜಿಆರ್‌ವೈ. SI No.8 ದಿನಾಂಕ :5.5.2006.
2. ಆರ್ಥಿಕ ಇಲಾಖೆಯ ಆದೇಶ ಸಂ.ಎಫ್.ಡಿ 7 ಜೆಡ್‌ಪಿಎ 2003 ದಿನಾಂಕ:14.7.05.

**ಪ್ರಸ್ತಾವನೆ:**

ಕೇಂದ್ರ ಸರ್ಕಾರವು 2006-07ನೇ ಸಾಲಿಗೆ ಸಂಪೂರ್ಣ ಗ್ರಾಮೀಣ ರೋಜ್‌ಗಾರ್ ಯೋಜನೆಯಡಿ ರಾಜ್ಯದ 22 ಜಿಲ್ಲೆಗಳಿಗೆ, ರೂ, 16224,75 ಲಕ್ಷಗಳ ಅನುದಾನವನ್ನು ಹಂಚಿಕೆ ಮಾಡಿ, ಕೇಂದ್ರದ ಪಾಲಿನ ಮೊದಲನೇ ಕಂತಿನ ಅನುದಾನ ರೂ. 9734.86 ಲಕ್ಷಗಳನ್ನು ಜಿಲ್ಲಾ ಪಂಚಾಯತಿಗಳಿಗೆ ನೇರವಾಗಿ ಬಿಡುಗಡೆ ಮಾಡಿ, ರಾಜ್ಯದ ಪಾಲಿನ ಅನುದಾನವನ್ನು ಬಿಡುಗಡೆ ಮಾಡುವಂತೆ ಸೂಚಿಸಿದೆ. ಪ್ರಸ್ತುತ ರಾಜ್ಯ ಸರ್ಕಾರವು ತನ್ನ ಪಾಲಿನ ಅನುದಾನ ರೂ. 3243.936 ಲಕ್ಷಗಳನ್ನು (ಶೇಕಡಾ 20ರ, 30ರ ಹಾಗೂ 50ರ ಭಾಗಾಂಶದ ಅನುದಾನ) ಬಿಡುಗಡೆ ಮಾಡಲು ನಿರ್ಧರಿಸಿದೆ. ಆದ್ದರಿದ ಈ ಕೆಳಕಡ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶದ ಸಂಖ್ಯೆ: ಗ್ರಾಅಪ.16 ಎಸ್‌ಜಿಆರ್‌ವೈ 2006, ಬೆಂಗಳೂರು, ದಿನಾಂಕ: 14ನೇ ಜೂನ್ 2006**

ಪ್ರಸಾವನೆಯಲ್ಲಿ ವಿವರಿಸಿದಂತೆ, 2006-07ನೇ ಸಾಲಿಗೆ ಸಂಪೂರ್ಣ ಗ್ರಾಮೀಣ ರೋಜ್‌ಗಾರ್ ಯೋಜನೆಯ ಜಿಲ್ಲಾ ಪಂಚಾಯತಿ, ತಾಲ್ಲೂಕು ಪಂಚಾಯತಿ ಹಾಗೂ ಗ್ರಾಮ ಪಂಚಾಯತಿ ಕಾರ್ಯಕ್ರಮಗಳಿಗಾಗಿ ಒಟ್ಟು ರೂ. 3243.936 ಲಕ್ಷಗಳನ್ನು (ಮೂವತ್ತೆರಡು ಕೋಟಿ ನಲವತ್ತಮ್ಮೂರು ಲಕ್ಷದ ತೊಂಭತ್ತ ಮೂರು ಸಾವಿರದ ಆರು ನೂರು ಮಾತ್ರ) ರಾಜ್ಯದ 22 ಜಿಲ್ಲಾ ಪಂಚಾಯಿಗಳಿಗೆ ಅನುಬಂಧದಲ್ಲಿ ನಮೂದಿಸಿದ್ದೆ ಬಿಡುಗಡೆ ಮಾಡಿದೆ.

2006-07ನೇ ಸಾಲಿನಲ್ಲಿ ಸಂಪೂರ್ಣ ಗ್ರಾಮೀಣ ರೋಜ್‌ಗಾರ್ ಯೋಜನೆಗೆ ಈಗಾಗಲೇ ಕೇಂದ್ರ ಸರ್ಕಾರವು ಹೊರಡಿಸಿರುವ ಹೊಸ ಮಾರ್ಗಸೂಚಿಯನ್ವಯ ಹಾಗೂ ಕೇಂದ್ರ ಹಾಗೂ ರಾಜ್ಯ ಸರ್ಕಾರಗಳು ಆಗಿಂದಾಗ್ಗೆ ಹೊರಡಿಸಲಾಗುವ ಆದೇಶ, ಸುತ್ತೋಲೆಗಳಲ್ಲಿ ತಿಳಿಸಿರುವ ರೀತ್ಯಾ ಎಲ್ಲಾ ಷರತ್ತು ಮತ್ತು ನಿಯಮಗಳನ್ನು ಕಟ್ಟುನಿಟ್ಟಾಗಿ ಪಾಲಿಸತಕ್ಕದ್ದು.

2006-07ನೇ ಸಾಲಿನಲ್ಲಿ ಜಿಲ್ಲೆಯಲ್ಲಿ ಒಟ್ಟು ಲಭ್ಯವಿರುವ ಆರಂಭಿಕ ಶಿಲ್ಕು ಶೇಕಡಾ 10ಕ್ಕಿಂತ ಮೀರಬಾರದು. ಆದರೆ ಪ್ರಸ್ತುತ ಸಾಲಿನಲ್ಲಿ ಶೇಕಡ 90ರಷ್ಟು ಮತ್ತು ಅದಕ್ಕೆ ಮಿಗಿಲಾಗಿ ವೆಚ್ಚ ಮಾಡುವುದು. ಇಲ್ಲದಿದ್ದಲ್ಲಿ ಮುಂದಿನ ವರ್ಷದ ಸಾಲಿನಲ್ಲಿ ಕೇಂದ್ರ ಸರ್ಕಾರವು ಬಿಡುಗಡೆ ಮಾಡುವ ಎರಡನೇ ಕಂತಿನ ಅನುದಾನದಲ್ಲಿ ಶೇಕಡಾ 10ರಷ್ಟು ಮೀರಿದ ಹೆಚ್ಚುವರಿ ಅನುದಾನವನ್ನು ಕಡಿತಗೊಳಿಸಲಾಗುವುದು.

2006-07ನೇ ಸಾಲಿಗೆ, ಸಂಪೂರ್ಣ ಗ್ರಾಮೀಣ ರೋಜ್‌ಗಾರ್ ಯೋಜನೆ ಕ್ರಿಯಾ ಯೋಜನೆಯಲ್ಲಿ ಈಗಾಗಲೇ ತಿಳಿಸಿರುವಂತೆ ಪರಿಶಿಷ್ಟ ಜಾತಿ:ಪರಿಶಿಷ್ಟ ಪಂಗಡಗಳಿಗೆ, ಫಲಾನುಭವಿ, ಆಧಾರಿತ ವ್ಯಕ್ತಿಗತ ಕಾರ್ಯಕ್ರಮಗಳಿಗೆ ನಮೂದಿಸಲಾದ ವಾಸದ ಘಟಕಗಳು, ನಿರ್ಮಲ ಶೌಚಾಲಯಗಳು ಮತ್ತು ಹೊಗೆ ರಹಿತ ಒಲೆಗಳನ್ನು ದಿನಾಂಕ:1.4.2006ರಿಂದ ಕೈಬಿಟ್ಟು ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸಲು ಸೂಚಿಸಿದೆ.

ಯೋಜನೆಯ ಅನುದಾನದ ವೆಚ್ಚವನ್ನು ಈ ಕೆಳಕಂಡ ಲೆಕ್ಕಶೀರ್ಷಿಕೆಯಲ್ಲಿ ಭರಿಸತಕ್ಕದ್ದು.

1. ಜಿಲ್ಲಾ ಪಂಚಾಯತಿ "2505- ಗ್ರಾಮೀಣ ಉದ್ಯೋಗ-60-ಇತರೆ ಕಾರ್ಯಕ್ರಮಗಳು-196 ಜಿಲ್ಲಾ ಪಂಚಾಯತಿಗಳಿಗೆ ಸಹಾಯ 6-ಜಿಲ್ಲಾ ಪಂಚಾಯತಿಗಳು-04-ಸಂಪೂರ್ಣ ಗ್ರಾಮೀಣ ರೋಜ್‌ಗಾರ್ ಯೋಜನೆ (2505-60-196-6-04) 2006-07 (ಯೋಜನೆ)"
2. ತಾಲ್ಲೂಕು ಪಂಚಾಯತ್ "2505-ಗ್ರಾಮೀಣ ಉದ್ಯೋಗ-60-ಇತರೆ ಕಾರ್ಯಕ್ರಮಗಳು-197 ತಾಲ್ಲೂಕು ಪಂಚಾಯತಿಗಳಿಗೆ ಸಹಾಯ-6-ತಾಲ್ಲೂಕು ಪಂಚಾಯತಿಗಳು-04-ಬ್ಲಾಕ್ ಅನುದಾನ ಸಂಪೂರ್ಣ ಗ್ರಾಮೀಣ ರೋಜ್‌ಗಾರ್ ಯೋಜನೆ (ಯೋಜನೆ) (2505-60-197-6-04) 2006-07 (ಯೋಜನೆ)"
3. ಗ್ರಾಮ ಪಂಚಾಯತ್ "2505-ಗ್ರಾಮೀಣ ಉದ್ಯೋಗ-60 ಇತರೆ ಕಾರ್ಯಕ್ರಮಗಳು-198 ಗ್ರಾಮ ಪಂಚಾಯತಿಗಳಿಗೆ ಸಹಾಯ-6-ಗ್ರಾಮ ಪಂಚಾಯತಿಗಳು-04-ರಾಜ್ಯ ಬ್ಲಾಕ್ ಅನುದಾನ ಸಂಪೂರ್ಣ ಗ್ರಾಮೀಣ ರೋಜ್‌ಗಾರ್ ಯೋಜನೆ (ಯೋಜನೆ) (2505-60-198-6-04) 2006-07 (ಯೋಜನೆ)"

ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ, ಎಫ್‌ಡಿ, 7, ಜೆಡ್‌ಪಿಎ, 2003 ದಿನಾಂಕ:14.7.2005ರನ್ವಯ ಅನುದಾನವನ್ನು ಖಜಾನೆಯಿಂದ ಪಡೆದು ವೆಚ್ಚವನ್ನು ನಿರ್ವಹಣೆ ಮಾಡುವುದು.

ಸರ್ಕಾರದ ಆದೇಶವನ್ನು ಈ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ, ಗ್ರಾಅಪ/292/ಪಿಬಿಎಸ್/2006 ದಿನಾಂಕ:14.6.2006ರಲ್ಲಿ ಸಹಮತಿಸಿದಂತೆ, ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್. ಶಾಂತರಾಜ್**
ನಿರ್ದೇಶಕರು, ಸ್ವ ಉದ್ಯೋಗ ಕಾರ್ಯಕ್ರಮಗಳು ಹಾಗೂ ಪದನಿಮಿತ್ತ
ಸರ್ಕಾರದ ಅಪರ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

### ANNEXURE TO G.O.NO.RDP:16:SGRY:2006, DATED: 14TH JUNE2006

Statement Showing the release of the I Instalment of State share under SGRY during 2006-07

| Sl. No | District | Object Code | Central Release dt. 5.5.2006 | State share proposed for releases as per column No.4 | Funds being released in this Order under Head of Account | | | Total funds released now |
|---|---|---|---|---|---|---|---|---|
| | | | | | 2505-60-196-6-04 (20%ZP share) | 2505-60-197-6-04 (30%TP share) | 2505-60-198-6-04 (50%GP share) | |
| 1 | 2 | 3 | 4 | 5 | 6 | 7 | 8 | 9 |
| 1. | Bagalkot | 461 | 404.600 | 134.867 | 26.973 | 40.460 | 67.433 | 134.866 |

| 1 | 2 | 3 | 4 | 5 | 6 | 7 | 8 | 9 |
|---|---|---|---|---|---|---|---|---|
| 2. | Bangalore (R) | 402 | 554.750 | 184.917 | 36.983 | 55.475 | 92.458 | 184.916 |
| 3 | Bangalore (U) | 401 | 430.730 | 143.577 | 28.715 | 43.073 | 71.788 | 143.576 |
| 4. | Belgaum | 413 | 585.520 | 195.173 | 39.035 | 58.552 | 97.587 | 195.174 |
| 5. | Bellary | 418 | 460.480 | 153.493 | 30.699 | 46.048 | 76.747 | 153.494 |
| 6. | Bijapur | 414 | 474.020 | 158.007 | 31.601 | 47.402 | 79.003 | 158.006 |
| 7. | C.R. Nagar | 456 | 384.550 | 128.183 | 25.637 | 38.455 | 64.092 | 128.184 |
| 8. | C.Magalur | 408 | 342.670 | 114.223 | 22.845 | 34.267 | 57.112 | 114.224 |
| 9. | D.Kannada | 409 | 284.710 | 94.903 | 18.981 | 28.471 | 47.452 | 94.904 |
| 10. | Dharwad | 415 | 287.400 | 95.800 | 19.160 | 28.740 | 47.900 | 95.800 |
| 11. | Gadag | 462 | 307.810 | 102.603 | 20.521 | 30.781 | 51.302 | 102.604 |
| 12. | Hassan | 410 | 540.180 | 180.060 | 36.012 | 54.018 | 90.030 | 180.060 |
| 13. | Haveri | 463 | 318.400 | 127.133 | 25.427 | 38.140 | 63.567 | 127.134 |
| 14. | Kodagu | 411 | 325.570 | 108.523 | 21.705 | 32.557 | 54.262 | 108.524 |
| 15. | Kolar | 404 | 976.100 | 325.367 | 5.073 | 97.610 | 162.683 | 325.366 |
| 16. | Koppal | 466 | 358.650 | 119.550 | 23.910 | 35.865 | 59.775 | 119.550 |
| 17. | Mandya | 412 | 343.580 | 114.527 | 22.905 | 34.358 | 57.263 | 114.526 |
| 18. | Mysore | 407 | 472.650 | 157.550 | 31.510 | 47.265 | 78.775 | 157.550 |
| 19. | Shimoga | 405 | 323.770 | 107.923 | 21.585 | 32.377 | 53.962 | 107.924 |
| 20. | Tumkur | 406 | 836.550 | 278.850 | 55.770 | 83.655 | 139.425 | 278.850 |
| 21. | U.Kannda | 416 | 423.070 | 141.023 | 28.205 | 42.307 | 70.512 | 141.024 |
| 22. | Udupi | 457 | 236.100 | 78.700 | 14.720 | 23.610 | 39.350 | 77.680 |
| | **TOTAL** | | **9734.860** | **3244.953** | **647.971** | **973.486** | **1622.477** | **3243.936** |

**ಟಿಪ್ಪಣಿ:** ಉಡುಪಿ ಜಿಲ್ಲಾ ಪಂಚಾಯ್ತಿಗೆ ಶೇ.20ರ ಭಾಗಾಂಶದಲ್ಲಿ ಕೊರತೆ ಬೀಳುವ 1.02 ಲಕ್ಷಗಳನ್ನು ನಂತರ ಬಿಡುಗಡೆಗೊಳಿಸಲಾಗುವುದು.

By Order and in the name of the Governor of Karnataka,
**R. SHANTHARAJ**
Director, Self Employment Programmes &
E/O Addl. Secretary to Government ,
Rural Development & Panchayat Raj Dept.

P.R. 1033

**ವಿಷಯ:** ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಅಧಿನಿಯಮ 2005ರಡಿ, ಕರ್ನಾಟಕ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯನ್ನು ಅನುಷ್ಠಾನಗೊಳಿಸಲು ರಾಜ್ಯದ ಪಾಲಿನ ಅನುದಾನವನ್ನು 2006-07ನೇ ಸಾಲಿನಲ್ಲಿ ಬಿಡುಗಡೆ ಮಾಡುವ ಬಗ್ಗೆ.

**ಉಲ್ಲೇಖ:**
1. ಕೇಂದ್ರ ಸರ್ಕಾರದ ಪತ್ರದ ಸಂಖ್ಯೆ: J-12022/2006-NREGA/SI.No. 11 ದಿನಾಂಕ:25.4.2006.
2. ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ ಇವರ ಪತ್ರದ ಸಂ.ಗ್ರಾಅಪ.22. ಉಖಾಯೋ. 06 ದಿನಾಂಕ:31.5.2006.

**ಪ್ರಸ್ತಾವನೆ**

ರಾಷ್ಟ್ರೀಯ ಗ್ರಾಮೀಣಾ ಉದ್ಯೋಗ ಖಾತರಿ ಅಧಿನಿಯಮ 2005ರಡಿ, ಕರ್ನಾಟಕ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯನ್ನು ಕರ್ನಾಟಕ ರಾಜ್ಯದ ಬೀದರ್, ಚಿತ್ರದುರ್ಗ, ದಾವಣಗೆರೆ, ಗುಲಬರ್ಗಾ ಮತ್ತು ರಾಯಚೂರು ಈ ಐದು ಜಿಲ್ಲೆಗಳಲ್ಲಿ ಅನುಷ್ಠಾನಗೊಳಿಸಲು ತನ್ನ ಪಾಲಿನ ಅನುದಾನವನ್ನು 2006-07ನೇ ಆರ್ಥಿಕ ಸಾಲಿಗೆ ಸಹಾಯಾನುದಾನವಾಗಿ ರೂ.6329.69 ಲಕ್ಷಗಳನ್ನು ಕೇಂದ್ರ ಸರ್ಕಾರ ಬಿಡುಗಡೆ ಮಾಡಿದೆ.

ಯೋಜನೆಯ ರೂಪುರೇಷೆಗಳ ಪ್ರಕಾರ, ಒಟ್ಟು ಮೊತ್ತದಲ್ಲಿ ಶೇಕಡಾ 60 ರಷ್ಟನ್ನು ಕೂಲಿ ಘಟಕಕ್ಕೆ ಮತ್ತು ಶೇಕಡ 40ರಷ್ಟನ್ನು ಸಾಮಾಗ್ರಿ ಘಟಕಕ್ಕೆ ನಿಗದಿಪಡಿಸಲಾಗಿದೆ.

ಸಾಮಾಗ್ರಿಗಳ ಘಟಕದ ಶೇಕಡಾ 40ರ ಭಾಗಾಂಶದಲ್ಲಿ ಶೇಕಡಾ 75ರಷ್ಟನ್ನು ಕೇಂದ್ರ ಸರ್ಕಾರ ಹಾಗೂ ಶೇಕಡಾ 25ರಷ್ಟನ್ನು ರಾಜ್ಯ ಸರ್ಕಾರ ಭರಿಸಬೇಕಾಗುತ್ತದೆ.

ಕೇಂದ್ರ ಸರ್ಕಾರ ಬಿಡುಗಡೆ ಮಾಡಿರುವ ಮೊತ್ತಕ್ಕೆ ಅನುಗುಣವಾಗಿ ಯಾವ ಜಿಲ್ಲೆಯ ಯಾವ ತಾಲ್ಲೂಕಿಗೆ ರಾಜ್ಯದ ಪಾಲನ್ನು ಎಷ್ಟು ಪ್ರಮಾಣದಲ್ಲಿ ಬಿಡುಗಡೆ ಮಾಡಲಾಗುವುದು ಎಂಬುದನ್ನು ಉಲ್ಲೇಖ(2)ರ ಪತ್ರದಲ್ಲಿ ಈಗಾಗಲೇ ತಿಳಿಸಲಾಗಿದೆ. ಬಿಡುಗಡೆ ಮಾಡಲಾದ ಅನುದಾನವನ್ನು ಕೇಂದ್ರ ಸರ್ಕಾರದ ಅನುದಾನವೂ ಸೇರಿದಂತೆ ಯಾವ ಯಾವ ಬಾಬ್ತುಗಳಿಗೆ (ಪ್ರತ್ಯೇಕ ಬ್ಯಾಂಕಿನ ಖಾತೆಗಳಿಗೆ ಜಮೆ ಮಾಡಬೇಕು ಎಂಬುದನ್ನು ಸಹ ಉಲ್ಲೇಖ(2) ರ ಪತ್ರದಲ್ಲಿ ತಿಳಿಸಲಾಗಿದೆ. ಈ ಮೇಲಿನ ಕಾರಣಗಳಿಂದ, 2006-07ನೇ ಸಾಲಿನಲ್ಲಿ ಸಂಪೂರ್ಣ ಗ್ರಾಮೀಣಾ ರೋಜ್‌ಗಾರ್ ಯೋಜನೆಯ ಅಡಿಯಲ್ಲಿ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶದ ಸಂಖ್ಯೆ:ಗ್ರಾಅಪ:22:ಉಖಾಯೋ: 2006, ಬೆಂಗಳೂರು, ದಿನಾಂಕ: 12ನೇ ಜೂನ್ 2006**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಗಾಗಿ, ಕೇಂದ್ರದ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಅಧಿನಿಯಮ 2005ರಡಿಯಲ್ಲಿ ರಚಿಸಲಾದ ಕರ್ನಾಟಕ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯ ಕಾರ್ಯಕ್ರಮಗಳ ಅನುಷ್ಠಾನ ಹಾಗೂ ಉಲ್ಲೇಖ (2) ರ ಪತ್ರದ ಪ್ರಕಾರ ಸಾಮಾಗ್ರಿಗಳ ಘಟಕದ ವೆಚ್ಚಕ್ಕಾಗಿ ಅನುಬಂಧದಲ್ಲಿ ನಮೂದಿಸಿದಂತೆ ರಾಜ್ಯದ ಪಾಲಾದ ರೂ. 6,89,23,291,11 (ರೂಪಾಯಿ ಆರು ಕೋಟಿ ಎಂಬತ್ತೊಂಬತ್ತು ಲಕ್ಷ ಇಪ್ಪತ್ತಮೂರು ಸಾವಿರದ ಇನ್ನೂರ ತೊಂಬತ್ತೊಂದು ಮತ್ತು ಹನ್ನೊಂದು ಪೈಸೆಗಳು ಮಾತ್ರ) ಬಿಡುಗಡೆ ಮಾಡಿದೆ.

ಇದಕ್ಕಾಗಿ ಪ್ರತ್ಯೇಕ ಲೆಕ್ಕಶೀರ್ಷಿಕೆ ನಿಗದಿಪಡಿಸುವವರೆಗೂ, ಆರ್ಥಿಕ ಇಲಾಖೆಯ ಆದೇಶ ಸಂ.ಎಫ್‌ಡಿ.7.ಜೆಡ್‌ಪಿಎ. 2003 ದಿನಾಂಕ:14.7.2005 ರನ್ವಯ ಅನುದಾನವನ್ನು ಖಜಾನೆಯಿಂದ ಪಡೆದು ವೆಚ್ಚವನ್ನು ನಿರ್ವಹಣೆ ಮಾಡುವುದು ಹಾಗೂ ಈ ಕೆಳಕಂಡ ಲೆಕ್ಕಶೀರ್ಷಿಕೆಯಲ್ಲಿ ಈ ಅನುದಾನದ ವೆಚ್ಚವನ್ನು ಭರಿಸತಕ್ಕದ್ದು.

ಗ್ರಾಮ ಪಂಚಾಯತ್ "2505-ಗ್ರಾಮೀಣ ಉದ್ಯೋಗ-60-ಇತರೆ ಕಾರ್ಯಕ್ರಮಗಳು-198 ಗ್ರಾಮ ಪಂಚಾಯತಿಗಳಿಗೆ ಸಹಾಯ-6-ಗ್ರಾಮ ಪಂಚಾಯತಿಗಳು-04-ರಾಜ್ಯ ಬ್ಲಾಕ್ ಅನುದಾನ ಸಂಪೂರ್ಣ ಗ್ರಾಮೀಣ ರೋಜ್‌ಗಾರ್ ಯೋಜನೆ (ಯೋಜನೆ) (2505-60-198-6-04) 2006-07 (ಯೋಜನೆ)"

ಸಂಬಂಧಪಟ್ಟ ಅಧಿಕಾರಿಗಳು ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಗೆ ಸಂಬಂಧಿಸಿದಂತೆ ಈಗಾಗಲೇ ನೀಡಲಾದ ಆದೇಶ/ ಸುತ್ತೋಲೆ/ ಮಾರ್ಗಸೂಚಿಗಳ ರೀತ್ಯಾ ಕ್ರಮ ತೆಗೆದುಕೊಳ್ಳತಕ್ಕದ್ದು.

ಈ ಆದೇಶವನ್ನು ಈ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ. ಗ್ರಾಅಪ.296.ಪಿಬಿಎಸ್. 06. ದಿನಾಂಕ: 12.6.2006 ರಲ್ಲಿ ಸಹಮತಿಸಿದಂತೆ, ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್. ಶಾಂತರಾಜ್**
ನಿರ್ದೇಶಕರು, ಸ್ವ ಉದ್ಯೋಗ ಕಾರ್ಯಕ್ರಮಗಳು ಹಾಗೂ ಪದನಿಮಿತ್ತ
ಸರ್ಕಾರದ ಅಪರ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

**ANNEXURE TO G.O.NO.RDP:22:EGS:2006, BANGALORE, DATED:12TH JUNE 2006**

Statement Showing the details of the Release of IST Instalment of state share for the year 2006-07 nrega

| Sl. No. | District | Name of the Taluk | State Share towards material fund |
|---|---|---|---|
| 1. | Bidar | Bidar | 1926047.20 |
| | | Bhalki | 2042777.33 |
| | | Basavakalyan | 2101142.40 |
| | | Aurad | 2217872.53 |
| | | Humnabad | 1926047.20 |
| | | **District Total** | **10213886.67** |
| 2. | Chitradurga | Chitradurga | 2337930.38 |
| | | Molkalmuru | 1039080.17 |
| | | Challakere | 2532757.91 |
| | | Hiriyur | 2078160.34 |
| | | Hosadurag | 2143102.85 |
| | | Holalkere | 1883332.80 |
| | | **District Total** | **12014364.44** |
| 3. | Davanagere | Davanagere | 1973388.60 |
| | | Harihar | 1233367.87 |
| | | Honnall | 2318731.60 |
| | | Channagiri | 3009417.61 |
| | | Harapanahalli | 1726715.02 |
| | | Jagalur | 1085363.73 |
| | | **District Total** | **11346984.44** |
| 4. | Gulbarga | Gulbarga | 2326409.50 |
| | | Afzalpur | 1421694.69 |
| | | Aland | 2620276.95 |
| | | Chittapur | 2261787.01 |
| | | Chincholl | 2067919.55 |
| | | Jewargi | 2132542.04 |
| | | Yadgir | 2520276.95 |
| | | Sedam | 1486317.18 |
| | | Shahapur | 2326409.50 |
| | | Shorapur | 2714144.41 |
| | | **District Total** | **21777777.78** |
| 5. | Raichur | Raichur | 2565113.48 |
| | | Manvi | 2978841.46 |
| | | Deodurg | 2316876.69 |
| | | Lingsugur | 2896095.87 |
| | | Sindhanur | 2813350.27 |
| | | **District Total** | **13570277.78** |
| | **GRAND TOTAL:** | | **68923291.11** |

(Rupees Six Crores Eighty Nine Lakhs Twenty Three Thousand Two Hundred & Ninty One & Paise Eleven Only)

By Order and in the name of the Governor of Karnataka,
**R. SHANTHARAJ**
Director, Self Employment Programmes &
E/O Addl. Secretary to Government ,
Rural Development & Panchayat Raj Department.

P.R. 1034

## ಶಿಕ್ಷಣ ಸಚಿವಾಲಯ

**ವಿಷಯ:** 2006-06ನೇ ಶೈಕ್ಷಣಿಕ ಸಾಲಿಗೆ ಬೆಂಗಳೂರಿನ ಹೀರಾ ಎಜುಕೇಷನಲ್ ಟ್ರಸ್ಟ್‌ನ ಬೆಂಗಳೂರಿನಲ್ಲಿನ ಹೀರಾ ಕಾಲೇಜ್ ಆಫ್ ಎಜುಕೇಷನ್‌ಗೆ ವಿದ್ಯಾರ್ಥಿ ಪ್ರಮಾಣ ನಿರ್ಧರಣೆ.

**ಉಲ್ಲೇಖ:**
1. ದಿನಾಂಕ:27.12.2003ರ ಸಂಖ್ಯೆ:ಇಡಿ 398 ಯುಆರ್‌ಸಿ 2003ರ ಸರ್ಕಾರಿ ಆದೇಶ.
2. ದಿನಾಂಕ:31.1.2006, ಸಂಖ್ಯೆ:F.SRO/NCTE/B.ED/ 2005-06/5293ರ NCTEಯ ಪ್ರಾದೇಶಿಕ ನಿರ್ದೇಶಕರ ಪತ್ರ.
3. ದಿ:19.4.2006ರ ಕಾರ್ಯದರ್ಶಿ, ಹೀರಾ ಎಜುಕೇಷನಲ್ ಟ್ರಸ್ಟ್, ಬೆಂಗಳೂರು, ಇವರ ಪತ್ರ.

**ಪ್ರಸ್ತಾವನೆ**

1) ಸರ್ಕಾರಿ/ವಿಶ್ವವಿದ್ಯಾಲಯ/ಅನುದಾನಿತ/ಖಾಸಗಿ ಶಿಕ್ಷಣ ಕಾಲೇಜುಗಳಲ್ಲಿ ನಡೆಸಲಾಗುತ್ತಿರುವ ಬಿ.ಇಡಿ/ಬಿ.ಪಿ.ಎಡ್. ಕೋರ್ಸಿನ ವಿದ್ಯಾರ್ಥಿ ಪ್ರಮಾಣವನ್ನು ಪ್ರತಿ ಶೈಕ್ಷಣಿಕ ವರ್ಷಕ್ಕೆ ಅನ್ವಯವಾಗುವಂತೆ ಎನ್.ಸಿ.ಟಿ.ಇ. ಅಧಿನಿಯಮ 1993 ರ 14 ನೇ ಪ್ರಕರಣದಡಿ ಎನ್‌ಸಿಟಿಇ ಮಂಜೂರು ಮಾಡುವ ವಿದ್ಯಾರ್ಥಿ ಪ್ರಮಾಣವನ್ನು ಕೆ.ಎಸ್.ಯು ಅಧಿನಿಯಮದ 59(18)ನೇ ಪ್ರಕರಣದಡಿ ಓದಲಾದ ಕಾಲಕಾಲಕ್ಕೆ ತಿದ್ದುಪಡಿಯಾದ ಕರ್ನಾಟಕ ಬಿ.ಇಡಿ. ಕೋರ್ಸುಗಳಿಗೆ ವಿದ್ಯಾರ್ಥಿಗಳ ಪ್ರವೇಶಕ್ಕೆ ಅಭ್ಯರ್ಥಿಗಳ ಆಯ್ಕೆ ನಿಯಮಾವಳಿಗಳು. 1999 ರ 2 (1) ನೇ ನಿಯಮದಡಿ ಸರ್ಕಾರವು ನಿಗದಿಪಡಿಸುತ್ತಿದೆ.

2) ಉಲ್ಲೇಖ (1) ರಲ್ಲಿರುವ ಸರ್ಕಾರಿ ಆದೇಶದಲ್ಲಿ ಬೆಂಗಳೂರಿನ ಹೀರಾ ಎಜುಕೇಷನಲ್ ಟ್ರಸ್ಟ್‌ನ ಕಾಲೇಜ್ ಆಫ್ ಎಜುಕೇಷನ್, #201/14, ಆಲ್-ಬದರ್ ಕಾಂಪ್ಲೆಕ್ಸ್, ಸೆಪ್ಪಿಂಗ್ ರೋಡ್, ಬೆಂಗಳೂರು-560 001, ಈ ಕಾಲೇಜಿಗೆ ಬಿ.ಎಡ್. ಕೋರ್ಸನ್ನು 100(ಒಂದು ನೂರು ಮಾತ್ರ) ವಿದ್ಯಾರ್ಥಿ ಪ್ರಮಾಣದೊಂದಿಗೆ ಪ್ರಾರಂಭಿಸಲು ನಿರಾಕ್ಷೇಪಣಾ ಪತ್ರವನ್ನು ನೀಡಲಾಗಿತ್ತು. ಉಲ್ಲೇಖ (2)ರಲ್ಲಿರುವ ದಿನಾಂಕ:31.1.2006ರ ಆದೇಶದಲ್ಲಿ ಎನ್‌ಸಿಟಿಇಯು ಸದರಿ ಕಾಲೇಜಿನ ಬಿ.ಎಡ್ ಕೋರ್ಸಿಗೆ 2005-06ನೇ ಸಾಲಿನಿಂದ ಅನ್ವಯವಾಗುವಂತೆ 100(ಒಂದು ನೂರು ಮಾತ್ರ) ವಿದ್ಯಾರ್ಥಿ ಪ್ರಮಾಣದೊಂದಿಗೆ ಅನುಮೋದನೆ ನೀಡಿದ್ದು, ಉಲ್ಲೇಖ (3) ರಲ್ಲಿರುವ ದಿನಾಂಕ:19.4.2006ರ ಪತ್ರದಲ್ಲಿ ಸದರಿ ಸಂಸ್ಥೆಯ ಕಾರ್ಯದರ್ಶಿಯವರು ತಮ್ಮ ಕಾಲೇಜ್‌ನಲ್ಲಿ ಬಿ.ಎಡ್ ಕೋರ್ಸನ್ನು ಪ್ರಾರಂಭಿಸಲು ಮಂಜೂರಾತಿಯನ್ನು ನೀಡುವಂತೆ ಕೋರಿರುತ್ತಾರೆ. ಆದರಂತೆ ಈ ಕೆಳಕಂಡ ಆದೇಶ

**ಸರ್ಕಾರದ ಆದೇಶ ಸಂಖ್ಯೆ: ಇಡಿ 110 ಯುಬಿವಿ 2006, ಬೆಂಗಳೂರು, ದಿನಾಂಕ: 3ನೇ ಜುಲೈ 2006**

3) ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯಗಳ ಅಧಿನಿಯಮ 2000ದ 59 ನೇ ಪ್ರಕರಣದ (18) ನೇ ಉಪ ಪ್ರಕರಣದೊಂದಿಗೆ ಓದಲಾದ ಕರ್ನಾಟಕ ಬಿ.ಎಡ್.ಕೋರ್ಸುಗಳಿಗೆ ಅಭ್ಯರ್ಥಿಗಳ ಆಯ್ಕೆ ನಿಯಮಗಳು 1999ರ 2 (1) ನೇ ನಿಯಮದಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಬೆಂಗಳೂರಿನ ಹೀರಾ ಎಜುಕೇಷನಲ್ ಟ್ರಸ್ಟ್‌ನ ಕಾಲೇಜ್ ಆಫ್ ಎಜುಕೇಷನ್, #201/14, ಆಲ್-ಬದರ್ ಕಾಂಪ್ಲೆಕ್ಸ್, ಸೆಪ್ಪಿಂಗ್ ರೋಡ್, ಬೆಂಗಳೂರು-560 001, ಈಕಾಲೇಜಿನ ಬಿ.ಎಡ್. ಕೋರ್ಸಿಗೆ 2005-2006 ನೇ ಶೈಕ್ಷಣಿಕ ಸಾಲಿನಿಂದ ಅನ್ವಯವಾಗುವಂತೆ 100 (ಒಂದು ನೂರು ಮಾತ) ವಿದ್ಯಾರ್ಥಿ ಪ್ರಮಾಣವನ್ನು ನಿಗದಿಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಪಿ. ಮಂಜುನಾಥ್**

ಪಿ.ಆರ್. 1040

ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ. (ವಿಶ್ವವಿದ್ಯಾಲಯಗಳು)

## ಲೋಕೋಪಯೋಗಿ ಸಚಿವಾಲಯ

**ವಿಷಯ:** ಮಂಡ್ಯ ಜಿಲ್ಲೆ ಮದ್ದೂರು ತಾಲ್ಲೂಕಿನಲ್ಲಿ ಬರುವ ಎಂಟು ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸುವ ಬಗ್ಗೆ.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಇವರ ಪತ್ರ ಸಂಖ್ಯೆ:ಮುಇಂ:ಸಂಕದ:ಮೇಲ್ದಜೆ:ಮಾದೂದರು: ಸಇಂ5:8:2006-07 ದಿನಾಂಕ:23.6.06.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು ಇವರು ಮಂಡ್ಯ ಜಿಲ್ಲೆಯ ಮದ್ದೂರು ತಾಲ್ಲೂಕಿಗೆ ಸಂಬಂಧಿಸಿದಂತೆ ಎಂಟು ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸುವಂತೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ಸದರಿ ಗ್ರಾಮೀಣ ರಸ್ತೆಗಳು ತುಂಬಾ ದುಸ್ಥಿತಿಯಲ್ಲಿದ್ದು ವಾಹನಗಳು ಮತ್ತು ಸಾರ್ವಜನಿಕರು ಓಡಾಡಲು ತುಂಬಾ ತೊಂದರೆಯಾಗಿರುತ್ತದೆ. ಆದುದರಿಂದ ಈ ಗ್ರಾಮೀಣ ರಸ್ತೆಗಳನ್ನು ಸಾರ್ವಜನಿಕರ ಹಿತದೃಷ್ಟಿಯಿಂದ ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸುವುದು ಅವಶ್ಯಕವಾಗಿರುತ್ತದೆ ಎಂದು ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು ಇವರು ವರದಿ ಮಾಡಿರುತ್ತಾರೆ.

| ಕ್ರಮ ಸಂಖ್ಯೆ | ರಸ್ತೆಯ ವಿವರ | ಉದ್ದ (ಕಿಮೀ) |
|---|---|---|
| 1. | ಎಂ.ಎನ್. ರಸ್ತೆಯಿಂದ ಪಣ್ಣೆದೊಡ್ಡಿ, ಬೆಸಗರಹಳ್ಳಿ, ಮಹದ್ನಮಿದೊಡ್ಡಿ, ಮರಳಿಗ, ಕೀಳಘಟ್ಟ ನಂದಿಬಸವೇಶ್ವರ ದೇವಸ್ಥಾನ, ಹೂತಗೆರೆ, ವಿಠಲಾಪುರ, ಮಲ್ಲನುಪ್ಪೆ ಮಾರ್ಗ ಕೊರಟಗೆರೆ-ಬಾವಲಿ ರಸ್ತೆ (ರಾಜ್ಯ ಹೆದ್ದಾರಿ-33) ಸೇರುವ ರಸ್ತೆ. | 20.00 |
| 2. | ಕೊರಟಗೆರೆ-ಬಾವಲಿರಸ್ತೆ (ರಾಜ್ಯ ಹೆದ್ದಾರಿ-33) ರಿಂದ ಆತಗೂರು, ತೊರೆಶೆಟ್ಟಿಹಳ್ಳಿ, ಮುದುಗೆರೆ, ಮಾರಸಿಂಗನಹಳ್ಳಿ, ಹೊಸಕೆರೆ, ಚಾಮನಹಳ್ಳಿ ಮಾರ್ಗ ಎಂ.ಎನ್. ರಸ್ತೆ ಸೇರುವ ರಸ್ತೆ. | 20.00 |

| ಕ್ರಮ ಸಂಖ್ಯೆ | ರಸ್ತೆಯ ವಿವರ | ಉದ್ದ (ಕಿಮೀ) |
|---|---|---|
| 3. | ಕೊರಟಗೆರೆ-ಬಾವಲಿರಸ್ತೆ (ರಾಜ್ಯ ಹೆದ್ದಾರಿ-33) ರಸ್ತೆಯಿಂದ ಗೊರವನಹಳ್ಳಿ, ವೈದ್ಯನಾಥಪುರ, ಆಲೂರು ಕೆ. ಹೊನ್ನಲಗೆರೆ ತೊಪ್ಪನಹಳ್ಳಿ, ರಾಜೇಗೌಡನದೊಡ್ಡಿ, ಚಂದಹಳ್ಳಿದೊಡ್ಡಿ ಕ್ರಾಸ್, ಬ್ಯಾಡರಹಳ್ಳಿ, ಮಾದನಾಯಕನಹಳ್ಳಿ, ತಿಪ್ಪೂರು ಮಾದಾಪುರದ ದೊಡ್ಡಿ, ಕೊಂಗಬೋರನದೊಡ್ಡಿ ಮಾರ್ಗ ಬಿ.ಎನ್. ರಸ್ತೆ (ರಾಜ್ಯ ಹೆದ್ದಾರಿ-17) ಸೇರುವ ರಸ್ತೆ. | 20.00 |
| 4. | ಎಂ.ಎನ್. ರಸ್ತೆಯಿಂದ ಹೊಸಕೆರೆ, ಆನೆದೊಡ್ಡಿ, ಮಾರಸಿಂಗನಹಳ್ಳಿ, ಮುದಗೆರೆ, ಮುಳ್ಳಹಳ್ಳಿ, ನಾಗನದೊಡ್ಡಿ, ನಿಲುವಾಗಿಲು, ಎನ್. ಕೋಡಿಹಳ್ಳಿ, ಅರೆಕಲ್ಲುದೊಡ್ಡಿ, ಕೀಳಘಟ್ಟ, ಅಣ್ಣೆದೊಡ್ಡಿ, ತಗ್ಗಹಳ್ಳಿ, ಮೂಡ್ಯ, ಹಳೇಹಳ್ಳಿ, ಕಿರಂಗೂರು, ಬೆಕ್ಕಳಲೆ, ಯಡಗನಹಳ್ಳಿ, ಕೌಡ್ಲೆ, ಕೆ. ಮಲ್ಲಿಗೆರೆ, ಬೋಳಾಕೆ, ತರಮನಕಟ್ಟೆ ಮೂಲಕ ಸಿರಾ-ನಂಜನಗೂಡು ರಾಜ್ಯ ಹೆದ್ದಾರಿ-84 ಸೇರುವ ರಸ್ತೆ. | 36.00 |
| 5 | ಕೊರಟಗೆರೆ-ಬಾವಲಿರಸ್ತೆ (ರಾಜ್ಯಹೆದ್ದಾರಿ-33) ರಸ್ತೆಯಿಂದ ಬಿ.ಎನ್. ರಸ್ತೆ ಮಾರ್ಗ ಕುದರಗುಂಡಿ ಕಾಲೋನಿ, ಎಸ್.ಸಿ. ಮಲ್ಲಯ್ಯ ಬಡಾವಣೆ, ಕುದರಗುಂಡಿ, ಬಸವನಪುರ, ಗೆಜ್ಜಲಗೆರೆ, ವಳಗೆರೆಹಳ್ಳಿ, ಗೆಜ್ಜಲಗೆರೆ ಕಾಲೋನಿ. | 17.00 |
| 6. | ಎಂ.ಎನ್. ರಸ್ತೆಯಿಂದ ಕೊಪ್ಪ ಮಾರ್ಗ ಡಿ.ಹೊಸಹಳ್ಳಿ, ಮೂಡಲದೊಡ್ಡಿ, ಗೂಳೂರು ದೊಡ್ಡ, ಕಾಲೋನಿ, ಗೂಳೂರು ದೊಡ್ಡಿ, ಗೊಳೂರು ಬಿದರಕೋಟೆ, ನಂಬಿನಾಯಕನಹಳ್ಳಿ. | 12.00 |
| 7. | ಬಿ.ಎನ್. (ರಾಜ್ಯ ಹೆದ್ದಾರಿ-17) ರಸ್ತೆಯಿಂದ ನಿಡಘಟ್ಟ, ಹೊಸಹಳ್ಳಿ, ಮಾರದೇವನಹಳ್ಳಿ, ಅತಗೂರು, ತೋರೆಶೆಟ್ಟಿಹಳ್ಳಿ ಮಾರ್ಗ ಎಂ.ಎನ್. ರಸ್ತೆ. | 14.00 |
| 8. | ಕೊರಟಗೆರೆ-ಬಾವಲಿರಸ್ತೆ (ರಾಜ್ಯ ಹೆದ್ದಾರಿ -33) ರಸ್ತೆಯಿಂದ ಮಲ್ಲನಾಯಕನಹಳ್ಳಿ, ಕುಂದನಕುಪ್ಪೆ, ಅರಕನಹಳ್ಳಿ ಮಾರ್ಗ ಕೊರಟಗೆರೆ -ಬಾವಲಿ ರಸ್ತೆ ಸೇರುವುದು. | 10.00 |

**ಸರ್ಕಾರದ ಆದೇಶ ಸಂಖ್ಯೆ:ಲೋ ಇ 144 ಸಿಆರ್‌ಎಂ 2006, ಬೆಂಗಳೂರು, ದಿನಾಂಕ: 6ನೇ ಜುಲೈ 2006**

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು ಇವರ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ, ಈ ಕೆಳಗಿನ ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸಿ ಲೋಕೋಪಯೋಗಿ ಇಲಾಖೆಯ ವ್ಯಾಪ್ತಿಗೆ ತೆಗೆದುಕೊಳ್ಳಲು ಸರ್ಕಾರದ ಅನುಮೋದನೆ ನೀಡಲಾಗಿದೆ.

| ಕ್ರಮ ಸಂಖ್ಯೆ | ರಸ್ತೆಯ ವಿವರ | ಉದ್ದ (ಕಿಮೀ) |
|---|---|---|
| 1. | ಎಂ.ಎನ್. ರಸ್ತೆಯಿಂದ ಪಣ್ಣೆದೊಡ್ಡಿ, ಬೆಸಗರಹಳ್ಳಿ, ಮಹರ್ನಮಿದೊಡ್ಡಿ, ಮರಳಿಗ, ಕೀಳಘಟ್ಟ ನಂದಿಬಸವೇಶ್ವರ ದೇವಸ್ಥಾನ, ಹೂತಗೆರೆ, ವಿಠಲಾಪುರ, ಮಲ್ಲನುಪ್ಪೆ ಮಾರ್ಗ ಕೊರಟಗೆರೆ-ಬಾವಲಿ ರಸ್ತೆ (ರಾಜ್ಯ ಹೆದ್ದಾರಿ-33) ಸೇರುವ ರಸ್ತೆ. | 20.00 |
| 2. | ಕೊರಟಗೆರೆ-ಬಾವಲಿರಸ್ತೆ (ರಾಜ್ಯ ಹೆದ್ದಾರಿ-33) ರಿಂದ ಆತಗೂರು, ತೊರೆಶೆಟ್ಟಿಹಳ್ಳಿ, ಮುದುಗೆರೆ, ಮಾರಸಿಂಗನಹಳ್ಳಿ, ಹೊಸಕೆರೆ, ಚಾಮನಹಳ್ಳಿ ಮಾರ್ಗ ಎಂ.ಎನ್. ರಸ್ತೆ ಸೇರುವ ರಸ್ತೆ. | 20.00 |
| 3. | ಕೊರಟಗೆರೆ-ಬಾವಲಿರಸ್ತೆ (ರಾಜ್ಯ ಹೆದ್ದಾರಿ-33) ರಸ್ತೆಯಿಂದ ಗೊರವನಹಳ್ಳಿ, ವೈದ್ಯನಾಥಪುರ, ಆಲೂರು ಕೆ. ಹೊನ್ನಲಗೆರೆ ತೊಪ್ಪನಹಳ್ಳಿ, ರಾಜೇಗೌಡನದೊಡ್ಡಿ, ಚಂದಹಳ್ಳಿದೊಡ್ಡಿ ಕ್ರಾಸ್, ಬ್ಯಾಡರಹಳ್ಳಿ, ಮಾದನಾಯಕನಹಳ್ಳಿ, ತಿಪ್ಪೂರು ಮಾದಾಪುರದ ದೊಡ್ಡಿ, ಕೊಂಗಬೋರನದೊಡ್ಡಿ ಮಾರ್ಗ ಬಿ.ಎನ್. ರಸ್ತೆ (ರಾಜ್ಯ ಹೆದ್ದಾರಿ-17)ಸೇರುವ ರಸ್ತೆ. | 20.00 |
| 4. | ಎಂ.ಎನ್. ರಸ್ತೆಯಿಂದ ಹೊಸಕೆರೆ, ಆನೆದೊಡ್ಡಿ, ಮಾರಸಿಂಗನಹಳ್ಳಿ, ಮುದಗೆರೆ, ಮುಳ್ಳಹಳ್ಳಿ, ನಾಗನದೊಡ್ಡಿ, ನಿಲುವಾಗಿಲು, ಎನ್. ಕೋಡಿಹಳ್ಳಿ, ಅರೆಕಲ್ಲುದೊಡ್ಡಿ, ಕೀಳಘಟ್ಟ, ಅಣ್ಣೆದೊಡ್ಡಿ, ತಗ್ಗಹಳ್ಳಿ, ಮೂಡ್ಯ, ಹಳೇಹಳ್ಳಿ, ಕಿರಂಗೂರು, ಬೆಕ್ಕಳಲೆ, ಯಡಗನಹಳ್ಳಿ, ಕೌಡ್ಲೆ, ಕೆ. ಮಲ್ಲಿಗೆರೆ, ಬೋಳಾಕೆ, ತರಮನಕಟ್ಟೆ ಮೂಲಕ ಸಿರಾ-ನಂಜನಗೂಡು ರಾಜ್ಯ ಹೆದ್ದಾರಿ-84 ಸೇರುವ ರಸ್ತೆ. | 36.00 |
| 5 | ಕೊರಟಗೆರೆ-ಬಾವಲಿರಸ್ತೆ (ರಾಜ್ಯಹೆದ್ದಾರಿ-33) ರಸ್ತೆಯಿಂದ ಬಿ.ಎನ್. ರಸ್ತೆ ಮಾರ್ಗ ಕುದರಗುಂಡಿ ಕಾಲೋನಿ, ಎಸ್.ಸಿ. ಮಲ್ಲಯ್ಯ ಬಡಾವಣೆ, ಕುದರಗುಂಡಿ, ಬಸವನಪುರ, ಗೆಜ್ಜಲಗೆರೆ, ವಳಗೆರೆಹಳ್ಳಿ, ಗೆಜ್ಜಲಗೆರೆ ಕಾಲೋನಿ. | 17.00 |
| 6. | ಎಂ.ಎನ್. ರಸ್ತೆಯಿಂದ ಕೊಪ್ಪ ಮಾರ್ಗ ಡಿ.ಹೊಸಹಳ್ಳಿ, ಮೂಡಲದೊಡ್ಡಿ, ಗೂಳೂರು ದೊಡ್ಡ, ಕಾಲೋನಿ, ಗೂಳೂರು ದೊಡ್ಡಿ, ಗೊಳೂರು ಬಿದರಕೋಟೆ, ನಂಬಿನಾಯಕನಹಳ್ಳಿ. | 12.00 |
| 7. | ಬಿ.ಎನ್. (ರಾಜ್ಯ ಹೆದ್ದಾರಿ-17) ರಸ್ತೆಯಿಂದ ನಿಡಘಟ್ಟ, ಹೊಸಹಳ್ಳಿ, ಮಾರದೇವನಹಳ್ಳಿ, ಅತಗೂರು, ತೋರೆಶೆಟ್ಟಿಹಳ್ಳಿ ಮಾರ್ಗ ಎಂ.ಎನ್. ರಸ್ತೆ. | 14.00 |
| 8. | ಕೊರಟಗೆರೆ-ಬಾವಲಿರಸ್ತೆ (ರಾಜ್ಯ ಹೆದ್ದಾರಿ -33) ರಸ್ತೆಯಿಂದ ಮಲ್ಲನಾಯಕನಹಳ್ಳಿ, ಕುಂದನಕುಪ್ಪೆ, ಅರಕನಹಳ್ಳಿ ಮಾರ್ಗ ಕೊರಟಗೆರೆ -ಬಾವಲಿ ರಸ್ತೆ ಸೇರುವುದು. | 10.00 |

ಈ ಆದೇಶವನ್ನು ಮಾನ್ಯ ಲೋಕೋಪಯೋಗಿ ಮತ್ತು ಇಂಧನ ಸಚಿವರ ಆದೇಶದ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಜಿ. ನಾರಾಯಣ**

ಪಿ.ಆರ್. 1041

ಸರ್ಕಾರದ ಅಧೀನ ಕಾರ್ಯದರ್ಶಿ,

ಲೋಕೋಪಯೋಗಿ ಇಲಾಖೆ. (ಸಂಪರ್ಕ)

## ಸಹಕಾರ ಸಚಿವಾಲಯ

**ವಿಷಯ:** ಕರ್ನಾಟಕ ಅರ್ಬನ್ ಹೌಸಿಂಗ್ ಕೋ-ಆಪರೇಟಿವ್ ಸೊಸೈಟಿ ನಿಯಮಿತ, ಬೆಂಗಳೂರು ಇದರ ಆಡಳಿತಾಧಿಕಾರಿಯ ಅವಧಿಯನ್ನು ವಿಸ್ತರಿಸುವ ಬಗ್ಗೆ.

**ಓದಲಾಗಿದೆ:** ಸಹಕಾರ ಸಂಘಗಳ ನಿಬಂಧಕರ ಪತ್ರ ಸಂಖ್ಯೆ: ಹೆಚ್. ಎಸ್.ಜಿ-1 ಹೆಚ್.ಹೆಚ್.ಎಸ್./89/2004-2005 ದಿನಾಂಕ: 13. 3. 2006 ಮತ್ತು ದಿನಾಂಕ:17.1.2006.

**ಪ್ರಸ್ತಾವನೆ:**

ಕರ್ನಾಟಕ ಅರ್ಬನ್ ಹೌಸಿಂಗ್ ಕೋ-ಆಪರೇಟಿವ್ ಸೊಸೈಟಿ ನಿ,. ಬೆಂಗಳೂರು ಇದಕ್ಕೆ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 ಪ್ರಕರಣ 28ಎ (5) ರ ಪ್ರಕಾರ ದಿನಾಂಕ:22.10.1999 ರಂದು ಆರು ತಿಂಗಳ ಅವಧಿಗೆ ಸಹಕಾರ ಸಂಘಗಳ ಉಪನಿಬಂಧಕರು ಬೆಂಗಳೂರು ನಗರ ಜಿಲ್ಲೆ ಇವರು ಆಡಳಿತಗಾರರನ್ನು ನೇಮಿಸಿದ್ದು ಸಂಘದ ಆಡಳಿತ ಮಂಡಳಿಯನ್ನು ರಚನೆ ಮಾಡಲು ಅನೇಕ ತೊಡಕುಗಳಿದ್ದಾಗ್ಯೂ ಆಡಳಿತಗಾರರು ಲಭ್ಯವಿರುವ ಮಾಹಿತಿಗಳ ಆಧಾರದ ಮೇಲೆ ಮತದಾರರ ಪಟ್ಟಿಯನ್ನು ತಯಾರಿಸಿ ದಿನಾಂಕ:16.8.2000 ರಂದು ಆಡಳಿತ ಮಂಡಳಿ ಚುನಾವಣೆಯನ್ನು ನಿಗದಿಪಡಿಸಿ ಚುನಾವಣಾ ಪ್ರಕ್ರಿಯೆಯನ್ನು ಪ್ರಾರಂಭಿಸಿದ್ದು ಸದಸ್ಯರ ಪಟ್ಟಿಯಲ್ಲಿ ಗೊಂದಲವಿದ್ದ ಕಾರಣ ಗೌರವ ಶ್ರೇಷ್ಠ ನ್ಯಾಯಾಲಯದಲ್ಲಿ ಸಲ್ಲಿಸಿದ ರಿಟ್ ಅರ್ಜಿ ಸಂಖ್ಯೆ:27447/2000ದಲ್ಲಿ ಶ್ರೇಷ್ಠ ನ್ಯಾಯಾಲಯವು ಹೊರಡಿಸಿದ ಮಧ್ಯಂತರ ಆದೇಶದಲ್ಲಿ ಚುನಾವಣಾ ಫಲಿತಾಂಶ ಪ್ರಕಟಿಸದಂತೆ ಚುನಾವಣಾಧಿಕಾರಿಯವರಿಗೆ ನಿರ್ದೇಶನ ನೀಡಿದ್ದು ಶ್ರೇಷ್ಠ ನ್ಯಾಯಾಲಯವು ರಿಟ್ ಅರ್ಜಿಯನ್ನು ಅಂತಿಮವಾಗಿ ದಿನಾಂಕ:19.7.2002 ರಂದು ಇತ್ಯರ್ಥ ಪಡಿಸಿ ಸದರಿ ಆದೇಶದಲ್ಲಿ ರಿಟ್ ಅರ್ಜಿದಾರರು ಸದಸ್ಯತ್ವದ ಬಗ್ಗೆ ಸಕ್ಷಮ ಪ್ರಾಧಿಕಾರದ ಮುಂದೆ ದಾವಾ ಹೂಡಿ ಸೂಕ್ತ ಪರಿಹಾರವನ್ನು ಪಡೆದುಕೊಳ್ಳುವಂತೆ ಸೂಚನೆ ನೀಡಿರುತ್ತದೆಂದೂ ರಿಟ್ ಅರ್ಜಿದಾರರು ಶ್ರೇಷ್ಠ ನ್ಯಾಯಾಲಯದ ಆದೇಶದಂತೆ ಸದಸ್ಯತ್ವದ ಬಗ್ಗೆ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 70ರಡಿ ಬೆಂಗಳೂರು 1ನೇ ವಲಯದ ಸಹಕಾರ ಸಂಘಗಳ ಸಹಾಯಕ ನಿಬಂಧಕರ ಮುಂದೆ ದಾವಾ ಹೂಡಿದ್ದು ಈ ಪ್ರಕರಣವು ಇತ್ಯರ್ಥಕ್ಕೆ ಬಾಕಿಯಿರುತ್ತದೆಂದೂ ಇದೇ ರೀತಿಯಾಗಿ ಸಂಘದ ಹಿಂದಿನ ಆಡಳಿತ ಮಂಡಳಿಯು ಅನರ್ಹ ಸದಸ್ಯರಿಗೆ ಅಕ್ರಮವಾಗಿ ನಿರ್ದೇಶನ ನೋಂದಣಿ ಮಾಡಿರುವ ಬಗ್ಗೆ ಪ್ರಕರಣ 70ರಡಿಯಲ್ಲಿ ದಾವೆ ದಾಖಲಿಸಿದ್ದು ನೈಜ ಸದಸ್ಯತ್ವದ ಇತ್ಯರ್ಥವಾಗಲು ಬಾಕಿಯಿರುತ್ತದೆಂದೂ ಗೌರವ ಶ್ರೇಷ್ಠ ನ್ಯಾಯಾಲಯವು ರಿಟ್ ಅರ್ಜಿ ಸಂಖ್ಯೆ:27447/2000 ಅನ್ನು ಅಂತಿಮವಾಗಿ ಇತ್ಯರ್ಥ ಪಡಿಸಿ ಹೊರಡಿಸಿದ ಆದೇಶದಲ್ಲಿ ಚುನಾವಣಾ ಪ್ರಕ್ರಿಯೆಯಲ್ಲಿ ಮುಂದಿನ ಕ್ರಮ ಕೈಗೊಳ್ಳುವ ಬಗ್ಗೆ ಯಾವುದೇ ಸ್ಪಷ್ಟ ನಿರ್ದೇಶನ ನೀಡದೇ ಇರುವುದರಿಂದ ಚುನಾವಣಾಧಿಕಾರಿಯು ಮುಂದಿನ ಕ್ರಮ ಕೈಗೊಳ್ಳಲು ಸಾಧ್ಯವಾಗಿರುವುದಿಲ್ಲವೆಂದೂ 1975-76 ರಿಂದ ಇಲ್ಲಿಯವರೆಗೆ ಸಂಘದ ಲೆಕ್ಕ ಪತ್ರಗಳು ಆಡಿಟ್ ಆಗಿರುವುದಿಲ್ಲ ಮತ್ತು ಮಹಾಸಭೆ ನಡೆಸಿರುವುದಿಲ್ಲವೆಂದೂ ದಿನಾಂಕ:27.2.1977ರ ನಂತರ ಸಂಘದ ಕಾರ್ಯಚಟುವಟಿಕೆಗಳನ್ನು ಕ್ರಮಬದ್ಧವಾಗಿ ನಿಯಮಾನುಸಾರ ನಡೆಸಿಕೊಂಡು ಬಂದಿರುವುದಿಲ್ಲವೆಂದೂ ತಿಳಿಸಿ ಸದರಿ ಸಂಘದ ಆಡಳಿತಗಾರರ ಅವಧಿಯನ್ನು ದಿನಾಂಕ:21.4.2000 ರಿಂದ ದಿನಾಂಕ:31.12.2006ರ ವರೆಗೆ ವಿಸ್ತರಿಸುವಂತೆ ಸಹಕಾರ ಸಂಘಗಳ ನಿಬಂಧಕರು ಮೇಲೆ ಓದಲಾದ (1) ರ ಪತ್ರದಲ್ಲಿ ಕೋರಿರುತ್ತಾರೆ. ಸಹಕಾರ ಸಂಘಗಳ ನಿಬಂಧಕರ ಪ್ರಸ್ತಾವೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಸಿಓ 20 ಸಿಎಲ್ಎಂ 2006, ಬೆಂಗಳೂರು, ದಿನಾಂಕ: 16ನೇ ಜೂನ್ 2006**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 121ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಸದರಿ ಅಧಿನಿಯಮದ ಪ್ರಕರಣ 28ಬಿ (3) ಈ ಕೆಳಕಂಡ ಮಾರ್ಪಾಟುಗಳೊಂದಿಗೆ ಕರ್ನಾಟಕ ಅರ್ಬನ್ ಹೌಸಿಂಗ್ ಕೋ-ಆಪರೇಟಿವ್ ಸೊಸೈಟಿ (ಲಿ) ಬೆಂಗಳೂರು ಇದಕ್ಕೆ ಅನ್ವಯವಾಗತಕ್ಕದ್ದೆಂದು ನಿರ್ದೇಶಿಸುತ್ತದೆ. ಎಂದರೆ:

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 28ಬಿ ಉಪಪ್ರಕರಣ (3)ರಲ್ಲಿನ **"ಆರು ತಿಂಗಳು"** ಎಂಬ ಪದಗಳಿಗೆ ಬದಲಾಗಿ **"ಎಂಬತ್ತೇಳು ತಿಂಗಳು"** ಎಂಬ ಪದಗಳನ್ನು ಪ್ರತ್ಯಾಯೋಜಿಸತಕ್ಕದ್ದು.

**ಸೂಚನೆ:** ಪ್ರಕರಣ 28ಬಿ ಉಪ-ಪ್ರಕರಣ (3) ಕ್ಕೆ ಮಾಡಿದ ಈ ಮಾರ್ಪಾಟು ದಿನಾಂಕ:31.12.2006ರವರೆಗೆ ಜಾರಿಯಲ್ಲಿರತಕ್ಕದ್ದು. ಈ ಅವಧಿ ಮುಗಿದ ನಂತರ ಈ ಆದೇಶದ ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಸದರಿ ಪ್ರಕರಣ 28ಬಿ ಉಪ-ಪ್ರಕರಣ (3)ರಲ್ಲಿನ ಉಪಬಂಧಗಳು ಪುನಃ ಜಾರಿಗೆ ಬರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್.ಎಸ್. ಹುಚ್ಚಾಚಾರಿ**
ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಜಂಟಿ ಕಾರ್ಯದರ್ಶಿ, ಸಹಕಾರ ಇಲಾಖೆ.

ಪಿ.ಆರ್. 1042

## ಜಲಸಂಪನ್ಮೂಲ ಸಚಿವಾಲಯ

**ವಿಷಯ:** ಸಣ್ಣ ನೀರಾವರಿ ಉಪ ವಿಭಾಗ,ಸಾಗರ ಕಛೇರಿಯನ್ನು ಶಿಕಾರಿಪುರಕ್ಕೆ ಸ್ಥಳಾಂತರಿಸುವ ಬಗ್ಗೆ.

**ಓದಲಾಗಿದೆ:** ಸರ್ಕಾರದ ಆದೇಶ ಸಂಖ್ಯೆ:ನೀಇ 16 ಸೇಸಎ 2001 ದಿ:26.11.2001.

**ಪ್ರಸ್ತಾವನೆ:**

ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ದ) ವಲಯ, ಬೆಂಗಳೂರು ಸಣ್ಣ ನೀರಾವರಿ ಕಾಮಗಾರಿಗಳ ಕಾರ್ಯಭಾರಕ್ಕನುಗುಣವಾಗಿ ಭೌಗೋಳಿಕ ಹಾಗೂ ಕಾರ್ಯನಿರ್ವಹಣೆ ದೃಷ್ಟಿಯಿಂದ ಕೆಲವು ಉಪ ವಿಭಾಗ ಹಾಗೂ ವಿಭಾಗಗಳ ಕೇಂದ್ರ ಸ್ಥಾನವನ್ನು ಮತ್ತು ಅವುಗಳಿಗೆ ವಹಿಸಿದ ತಾಲ್ಲೂಕುಗಳಲ್ಲಿ ಬದಲಾವಣೆ ಮಾಡುವುದು ಹಾಗೂ ಹೊಸ ವಿಭಾಗವನ್ನು ಹಾಗೂ ಉಪ ವಿಭಾಗಗಳನ್ನು ಅವಶ್ಯಕತೆ ಇರುವ ಕಡೇ ಸ್ಥಳಾಂತರಿಸಲು ಸರ್ಕಾರವು ನಿರ್ಧರಿಸಿ, ಮೇಲೆ ಓದಲಾದ ದಿನಾಂಕ:26.11.2001ರ ಆದೇಶದಲ್ಲಿ ಸಣ್ಣ ನೀರಾವರಿ ಉಪ ವಿಭಾಗ ಶಿಕಾರಿಪುರವನ್ನು ಸಣ್ಣ ನೀರಾವರಿ ಉಪ ವಿಭಾಗ, ಸಾಗರ ಎಂದು ಮರುನಾಮಾಂಕಿತಗೊಳಿಸಿ ಸಾಗರ ತಾಲ್ಲೂಕನ್ನು ಕೇಂದ್ರ ಸ್ಥಾನವನ್ನಾಗಿರಿಸಿ ಸ್ಥಳಾಂತರಿಸಲಾಗಿತ್ತು.

ಮೇಲ್ಕಂಡ ಆದೇಶವನ್ನು ಸರ್ಕಾರವು ಪುನರ್ ಪರಿಶೀಲಿಸಿದೆ. ಶಿಕಾರಿಪುರ ತಾಲ್ಲೂಕಿನಲ್ಲಿ 79 ಸಣ್ಣ ನೀರಾವರಿ ಕೆರೆಗಳಿದ್ದು, 5751 ಹೆಕ್ಟೇರು ಅಚ್ಚುಕಟ್ಟು ಪ್ರದೇಶವಿರುತ್ತದೆ. ಆದರೆ ಸಾಗರ ತಾಲ್ಲೂಕಿನಲ್ಲಿ 28 ಸಣ್ಣ ನೀರಾವರಿ ಕೆರೆಗಳು ಮತ್ತು 2 ಏತ ನೀರಾವರಿ ಯೋಜನೆಗಳಿದ್ದು ಒಟ್ಟು 1916 ಹೆಕ್ಟೇರು ಅಚ್ಚುಕಟ್ಟು ಪ್ರದೇಶವಿರುತ್ತದೆ. ಹೀಗಾಗಿ ಶಿಕಾರಿಪುರ ತಾಲ್ಲೂಕಿನಲ್ಲಿ ಅತಿ ಹೆಚ್ಚು ಸಣ್ಣ ನೀರಾವರಿ ಕೆರೆಗಳಿದ್ದು ಮತ್ತು ಅಚ್ಚುಕಟ್ಟು ಪ್ರದೇಶವು

ಹೆಚ್ಚಾಗಿರುತ್ತದೆ. ಆದುದರಿಂದ ಸಣ್ಣ ನೀರಾವರಿ ಉಪ ವಿಭಾಗದ ಅಧಿಕಾರಿಗಳು ಶಿಕಾರಿಪುರ ತಾಲ್ಲೂಕಿನ ಕೆರೆಗಳನ್ನು ಮೇಲುಸ್ತುವಾರಿ ಮಾಡುವುದು ಕಷ್ಟಕರವಾಗಿರುವುದನ್ನು ಸರ್ಕಾರವು ಮನಗಂಡು ಈ ಹಿಂದೆ ಇದ್ದಂತೆ ಸಣ್ಣ ನೀರಾವರಿ ಉಪ ವಿಭಾಗ, ಸಾಗರವನ್ನು ಸಣ್ಣ ನೀರಾವರಿ ಉಪ ವಿಭಾಗ ಶಿಕಾರಿಪುರ ಎಂದು ಮರು ನಾಮಾಂಕಿತಗೊಳಿಸಿ ಶಿಕಾರಿಪುರವನ್ನು ಕೇಂದ್ರ ಸ್ಥಾನವನ್ನಾಗಿರಿಸಿ ಸ್ಥಳಾಂತರಿಸಲು ಸರ್ಕಾರವು ನಿರ್ಧರಿಸಿದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 8ಸೇಸಎ 2005, ಬೆಂಗಳೂರು, ದಿನಾಂಕ: 10ನೇ ಜುಲೈ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ ಸಣ್ಣ ನೀರಾವರಿ ಉಪ ವಿಭಾಗ, ಸಾಗರವನ್ನು ಸಣ್ಣ ನೀರಾವರಿ ಉಪ ವಿಭಾಗ, ಶಿಕಾರಿಪುರ ಎಂದು ಮರು ನಾಮಾಂಕಿತಗೊಳಿಸಿ, ಶಿಕಾರಿಪುರವನ್ನು ಕೇಂದ್ರ ಸ್ಥಾನವನ್ನಾಗಿರಿಸಿ, ಸ್ಥಳಾಂತರಿಸಿದೆ. ಮತ್ತು ಇದರ ಆಡಳಿತ ವ್ಯಾಪ್ತಿಯಡಿಯಲ್ಲಿ ಶಿಕಾರಿಪುರ, ಸಾಗರ ಮತ್ತು ಸೊರಬ ತಾಲ್ಲೂಕುಗಳನ್ನು ತರಲು ಆದೇಶಿಸಿದೆ.

ಈ ಆದೇಶವು ತಕ್ಷಣದಿಂದ ಜಾರಿಗೆ ಬರುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ವಾಸುದೇವಮೂರ್ತಿ**

ಪಿ.ಆರ್. 1039

ಸರ್ಕಾರದ ಅಧೀನ ಕಾರ್ಯದರ್ಶಿ,

ಜಲಸಂಪನ್ಮೂಲ ಇಲಾಖೆ. (ಸಣ್ಣ ನೀರಾವರಿ)

## ಕಾನೂನು ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

**ವಿಷಯ:** ಗುಲಬರ್ಗಾ ಜಿಲ್ಲೆ ಆಳಂದ ಕಂದಾಯ ತಾಲ್ಲೂಕಿಗೆ ನೋಟರಿ ನೇಮಿಸುವ ಬಗ್ಗೆ

**ಉಲ್ಲೇಖ:**
1. ಸರ್ಕಾರಿ ಆದೇಶ ಸಂ.ಲಾ 98 ಎಲ್‌ಸಿಎಲ್ 03, ದಿನಾಂಕ:29.8.03
2. ಸರ್ಕಾರಿ ಸಮಸಂಖ್ಯೆ ಪತ್ರ ದಿನಾಂಕ:26/29.9.03
3. ಜಿಲ್ಲಾ ಸತ್ರ ನ್ಯಾಯಾಧೀಶರು, ಗುಲಬರ್ಗಾ ಇವರ ಪತ್ರ ಡಿಸಿಜಿ/ಎಡಿಎಂಎನ್/854/2004 ದಿನಾಂಕ:12.5.04

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಗುಲಬರ್ಗಾ ಜಿಲ್ಲೆ ಆಳಂದ್ ಕಂದಾಯ ತಾಲ್ಲೂಕಿಗೆ ಒಂದು ನೋಟರಿ ಹುದ್ದೆಯನ್ನು ಸೃಜಿಸಲಾಗಿತ್ತು. ಸದರಿ ಹುದ್ದೆಗೆ ನೇಮಕಾತಿ ಮಾಡುವ ಸಲುವಾಗಿ ನೋಟರಿ ನಿಯಮಗಳನ್ವಯ ಪರಿಶೀಲಿಸಿ ಪ್ರಸ್ತಾವನೆ ಸಲ್ಲಿಸುವಂತೆ ಮಾಲೆ (2)ರಲ್ಲಿ ಓದಲಾದ ಪತ್ರದಲ್ಲಿ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಗುಲಬರ್ಗಾ ಇವರನ್ನು ಕೋರಲಾಗಿತ್ತು.

ಆ ಮೇರೆಗೆ ಮೇಲೆ (3)ರಲ್ಲಿ ಓದಲಾದ ಪತ್ರದೊಂದಿಗೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಸದರಿ ಪ್ರಸ್ತಾವನೆ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ.ಲಾ 98 ಎಲ್‌ಸಿಎಲ್ 2003, ಬೆಂಗಳೂರು, ದಿನಾಂಕ: 23ನೇ ಜೂನ್ 2006**

ನೋಟರಿ ನಿಯಮಗಳ (1956)ರ ನಿಯಮ 8(1)ರಲ್ಲಿ ಪ್ರದತ್ತವಾಗಿರುವ ಅಧಿಕಾರ ಚಲಾಯಿಸಿ, ನೋಟರಿ ಅಧಿನಿಯಮ (1952) ಹಾಗೂ ಉಲ್ಲೇಖಿತ ನಿಯಮಗಳ ರೀತ್ಯ ಶ್ರೀ. ಸುರೇಶ್‌ಚಂದ್ರ ಪಾಟೀಲ್, ವಕೀಲರು, ನಂ.11.4.36/7 ಶೆರಿಕಾರ್ ಕಾಲೋನಿ, ಆಳಂಧ ಇವರನ್ನು ವೃತಿ ಪ್ರಮಾಣ ಪತ್ರ ನೀಡಲಾದ ದಿನಾಂಕದಿಂದ ಐದು ವರ್ಷಗಳ ಅವಧಿಗೆ ಆಳಂದ ಕಂದಾಯ ತಾಲ್ಲೂಕಿನ ನೋಟರಿಯನ್ನಾಗಿ ನೇಮಿಸಲಾಗಿದೆ.

ಸದರಿ ವಕೀಲರು ಲೆಕ್ಕ ಶೀರ್ಷಿಕೆ 0070-ಇತರೆ ಆಡಳಿತಾತ್ಮಕ ಸೇವೆಗಳು-01-ನ್ಯಾಯ ಪರಿಪಾಲನೆ-501-0 ಇತರೆ ಸ್ವೀಕೃತಿಗಳು-06ಇತರೆ ಬಾಬುಗಳಿಗೆ (0070-01-501-0-06) ಸರ್ಕಾರಿ ಖಜಾನೆಯಲ್ಲಿ ನಿಧಿಪಡಿಸಲಾದ ರೂ.1000 (ಒಂದು ಸಾವಿರಗಳು ಮಾತ್ರ) ಶುಲ್ಕವನ್ನು ಜಮಾ ಮಾಡಿ ಆ ಬಗೆಗಿನ ಚಲನ್ ಮತ್ತು ಹುಟ್ಟಿದ ದಿನಾಂಕವನ್ನು ದೃಢೀಕರಿಸಬಲ್ಲ ದಾಖಲೆಯನ್ನು ಹಾಜರುಪಡಿಸಿದ ನಂತರ ಸದರಿಯವರಿಗೆ ವೃತ್ತಿ ಪ್ರಮಾಣ ಪತ್ರ ನೀಡಲಾಗುವುದು.

ವೃತ್ತಿ ಪ್ರಮಾಣ ಪತ್ರ ನೀಡಿದ ನಂತರ ಶ್ರೀಯುತರ ಹೆಸರನ್ನು ನೋಟರಿ ಅಧಿನಿಯಮ (1952)ರ ಕಲಂ 4ನೇ ಪ್ರಕರಣದಡಿ ಸರ್ಕಾರ ನಿರ್ವಹಿಸುತ್ತಿರುವ ರಿಜಿಸ್ಟರ್‌ನಲ್ಲಿ ನಮೂದಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಶಕುಂತಲ ಹೆಚ್. ಆರ್.**

ಪಿ.ಆರ್. 1043

ಸರ್ಕಾರದ ಅಧೀನ ಕಾರ್ಯದರ್ಶಿ,

ಕಾನೂನು ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ.(ಆಡಳಿತ-2)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯದ ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆಯಲ್ಲಿ ಮಾನವ ಹಕ್ಕುಗಳ ಶಾಖೆಯನ್ನು ಸೃಜಿಸುವ ಬಗ್ಗೆ

**ಉಲ್ಲೇಖ:**
1. ಸರ್ಕಾರಿ ಆದೇಶ ಸಂಖ್ಯೆ:ಲಾ 46 ಎಲ್‌ಸಿಇ 2005, ದಿನಾಂಕ:28.6.05
2. ಅ.ಟಿ.ಸಂಖ್ಯೆ:ಲಾ 13 ಎಚ್‌ಆರ್‌ಪಿ 2005, ದಿ:30.11.2005.

**ಪ್ರಸ್ತಾವನೆ**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾಗಿರುವ ಸರ್ಕಾರದ ಆದೇಶದಲ್ಲಿ ಕಾನೂನು ಮತ್ತು ನ್ಯಾಯಾಡಳಿಕ್ಕೆ ಸಂಬಂಧಪಟ್ಟ ವಿಷಯಗಳಲ್ಲಿ ತ್ವರಿತ ಸುಧಾರಣೆ ತರುವ ನಿಟ್ಟಿನಲ್ಲಿ ಕಾನೂನು ಇಲಾಖೆಯು ಸಿದ್ದಪಡಿಸಿರುವ ನೀತಿ ಮತ್ತು ಕ್ರಿಯಾ ಯೋಜನೆಯನ್ನು ಅನುಷ್ಠಾನಗೊಳಿಸುವಲ್ಲಿ ಸೂಚನೆಗಳನ್ನು ನೀಡಲಾಗಿದೆ.

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾಗಿರುವ ಅನಧಿಕೃತ ಟಿಪ್ಪಣಿಯಲ್ಲಿ ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆಯು ಮಾನವ ಹಕ್ಕುಗಳ ಆಯೋಗಕ್ಕೆ ಸಂಬಂಧಪಟ್ಟ ವಿಷಯ ಹಾಗು ತತ್ಸಂಬಂಧವಾದ ವಿಷಯಗಳನ್ನು ಪರಿಣಾಮಕಾರಿಯಾಗಿ ತ್ವರಿತವಾಗಿ ನಿರ್ವಹಿಸಲು ಸಚಿವಾಲಯ ಮಟ್ಟದಲ್ಲಿ ಈ ಕೆಳಕಂಡ ಸಿಬ್ಬಂದಿಯೊಡನೆ ಮಾನವ ಹಕ್ಕುಗಳ ಶಾಖೆಯನ್ನು ರಚಿಸಲು ಪ್ರಸ್ತಾಪಿಸಿದೆ.

| | | |
|---|---|---|
| 1. | ಸರ್ಕಾರದ ಅಧೀನ ಕಾರ್ಯದರ್ಶಿ (ಮಾನವ ಹಕ್ಕುಗಳು) | 01 ಹುದ್ದೆ |
| 2. | ಶಾಖಾಧಿಕಾರಿ | 01 ಹುದ್ದೆ |
| 3. | ಹಿರಿಯ ಸಹಾಯಕ | 01 ಹುದ್ದೆ |
| 4. | ಸಹಾಯಕರು | 02 ಹುದ್ದೆಗಳು |
| 5. | ಶೀಘ್ರಲಿಪಿಗಾರ | 01 ಹುದ್ದೆ |
| 6. | ಬೆರಳಚ್ಚುಗಾರ:ಕಂಪ್ಯೂಟರ್ ಆಪರೇಟರ್ | 01 ಹುದ್ದೆ |
| 7. | ದಲಾಯತ್ | 01 ಹುದ್ದೆ |
| | **ಒಟ್ಟು** | **08 ಹುದ್ದೆಗಳು** |

ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 82 ಸಸಿವಿ 2005, ಬೆಂಗಳೂರು, ದಿನಾಂಕ: 7ನೇ ಜುಲೈ 2006**

ಕರ್ನಾಟಕ ಸರ್ಕಾರ ಸಚಿವಾಲಯದ ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆಯಲ್ಲಿ ಮಾನವ ಹಕ್ಕುಗಳ ಶಾಖೆಯನ್ನು ಈ ಕೆಳಕಂಡ ಸಿಬ್ಬಂದಿಗಳೊಂದಿಗೆ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸೃಜಿಸಲಾಗಿದೆ.

| | | |
|---|---|---|
| 1. | ಸರ್ಕಾರದ ಅಧೀನ ಕಾರ್ಯದರ್ಶಿ (ಮಾನವ ಹಕ್ಕುಗಳು) | 01 ಹುದ್ದೆ |
| 2. | ಶಾಖಾಧಿಕಾರಿ | 01 ಹುದ್ದೆ |
| 3. | ಹಿರಿಯ ಸಹಾಯಕ | 01 ಹುದ್ದೆ |
| 4. | ಸಹಾಯಕರು | 02 ಹುದ್ದೆಗಳು |
| 5. | ಶೀಘ್ರಲಿಪಿಗಾರ | 01 ಹುದ್ದೆ |
| 6. | ಬೆರಳಚ್ಚುಗಾರ:ಕಂಪ್ಯೂಟರ್ ಆಪರೇಟರ್ | 01 ಹುದ್ದೆ |
| 7. | ದಲಾಯತ್ | 01 ಹುದ್ದೆ |
| | **ಒಟ್ಟು** | **08 ಹುದ್ದೆಗಳು** |

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಆಇ 1110 ವೆಚ್ಚ -5/2006, ದಿನಾಂಕ:1.7.2006ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಪಿ. ಪ್ರಭು**

ಪಿ.ಆರ್. 1044

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2)

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ:** ಜಪಾನಿನ ಸಾಗರೋತ್ತರ ಆರ್ಥಿಕ ಸಹಕಾರ ನಿಧಿಯ ಸಹಾಯದಿಂದ ಕರ್ನಾಟಕ ಸ್ವಸ್ಥಿರ ಅರಣ್ಯ ನಿರ್ವಹಣೆ ಮತ್ತು ಜೀವಿವೈವಿಧ್ಯ ಸಂರಕ್ಷಣಾ ಯೋಜನೆಯನ್ನು 2005-06 ರಿಂದ 2012-13 ರವರೆಗೆ ಅನುಷ್ಠಾನಗೊಳಿಸಲು ವೃತ್ತಮಟ್ಟದ ಸಲಹಾ ಸಮಿತಿ ಮತ್ತು ವಿಭಾಗೀಯ ಮಟ್ಟದ ಕಾರ್ಯಕಾರಿ ಸಮಿತಿಗಳನ್ನು ಪುನರ್ ರಚಿಸುವ ಬಗ್ಗೆ

**ಉಲ್ಲೇಖ:**
1. ಸರ್ಕಾರಿ ಆದೇಶ ಸಂಖ್ಯೆ:ಅಪಜೀ 279 ಎಫ್‌ಎಜಿ 2003, ದಿನಾಂಕ:23.5.2005.
2. ಸರ್ಕಾರಿ ಆದೇಶ ಸಂಖ್ಯೆ:ಅಪಜೀ 279 ಎಫ್‌ಎಪಿ 2003, ದಿನಾಂಕ:4.8.2005 ಮತ್ತು 24.9.2005
3. ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ ರವರ ಪತ್ರಸಂಖ್ಯೆ:ಎ1/ಕೆಎಸ್‌ಎಫ್‌ಎಂಬಿಸಿ/ಇಎ/ಸಿಆರ್-13(ಎ)/2005-06 ದಿನಾಂಕ:21/25.4.2006.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ದಿನಾಂಕ:23.5.2005ರ ಆದೇಶದಲ್ಲಿ ಜಪಾನಿನ ಸಾಗರೋತ್ತರ ಆರ್ಥಿಕ ಸಹಕಾರ ನಿಧಿಯ ಸಹಾಯದಿಂದ ಕರ್ನಾಟಕ ಸ್ವಸ್ಥಿರ ಅರಣ್ಯ ನಿರ್ವಹಣೆ ಮತ್ತು ಜೀವಿವೈವಿಧ್ಯ ಸಂರಕ್ಷಣಾ ಯೋಜನೆಯನ್ನು 2005-06ನೇ ಸಾಲಿನಿಂದ 2012-13ನೇ ಸಾಲಿನವರೆಗೆ ಕರ್ನಾಟಕ ರಾಜ್ಯದ ಎಲ್ಲಾ 27 ಜಿಲ್ಲೆಗಳಲ್ಲಿ 8 ವರ್ಷಗಳ ಅವಧಿಯಲ್ಲಿ ರೂ.745.00 ಕೋಟಿಗಳ ವೆಚ್ಚದಲ್ಲಿ ಕೈಗೊಳ್ಳಲು ಆಡಳಿತಾತ್ಮಕ ಮಂಜೂರಾತಿ ನೀಡಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಆದೇಶದಲ್ಲಿ ಜಪಾನಿನ ಸಾಗರೋತ್ತರ ಆರ್ಥಿಕ ಸಹಕಾರ ನಿಧಿಯ ಸಹಾಯದಿಂದ ಕರ್ನಾಟಕ ಸ್ವಸ್ಥಿರ ಅರಣ್ಯ ನಿರ್ವಹಣೆ ಮತ್ತು ಜೀವಿವೈವಿಧ್ಯ ಸಂರಕ್ಷಣಾ ಯೋಜನೆಯನ್ನು ಅನುಷ್ಠಾನಗೊಳಿಸುವ ಸಲುವಾಗಿ ವಿಶೇಷ ಅಧಿಕಾರಸ್ಥ ಸಮಿತಿ, ರಾಜ್ಯಮಟ್ಟದ ಸಲಹಾ ಸಮಿತಿ, ವೃತ್ತ ಮಟ್ಟದ ಸಲಹಾ ಸಮಿತಿ ಮತ್ತು ಅರಣ್ಯ ವಿಭಾಗೀಯ ಮಟ್ಟದಲ್ಲಿನ ಕಾರ್ಯಕಾರಿ ಸಮಿತಿಯನ್ನು ರಚಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಪತ್ರದಲ್ಲಿ ಸರ್ಕಾರಿ ಆದೇಶ ದಿನಾಂಕ:4.8.2005ರಲ್ಲಿ ರಚಿಸಲ್ಪಟ್ಟ ವೃತ್ತ ಮಟ್ಟದ ಮತ್ತು ವಿಭಾಗೀಯ ಮಟ್ಟದ ಮತ್ತು ವಿಭಾಗೀಯ ಮಟ್ಟದ ಕಾರ್ಯಕಾರಿ ಸಮಿತಿಗಳಲ್ಲಿ ಕೆಲವು ಹುದ್ದೆಗಳು ಅಸ್ತಿತ್ವದಲ್ಲಿಲ್ಲ ಹಾಗೂ ಕೆಲವು ಹುದ್ದೆಗಳನ್ನು ಪುನರ್ ನಾಮಕರಣ ಮಾಡಲಾಗಿರುವುದರಿಂದ, ಸದರಿ ಸಮಿತಿಗಳಲ್ಲಿ ಅಸ್ತಿತ್ವದಲ್ಲಿರದೇ ಇರುವ ಹುದ್ದೆಗಳನ್ನು ತೆಗೆದು ಹೊಸ ಹುದ್ದೆಗಳನ್ನು ನಾಮಕರಣ ಮಾಡಿ ಸಮಿತಿಗಳನ್ನು ಪುನರ್ ರಚಿಸಿ ಪರಿಷ್ಕೃತ ಆದೇಶ ಹೊರಡಿಸುವಂತೆ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಯವರು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದ್ದು, ಸರ್ಕಾರಿ ಆದೇಶ ದಿನಾಂಕ:4.8.2005ರನ್ವಯ ರಚಿಸಲ್ಪಟ್ಟ ಕೆಲವು ಹುದ್ದೆಗಳು ಅಸ್ತಿತ್ವದಲ್ಲಿಲ್ಲ ಹಾಗೂ ಕೆಲವು ಹುದ್ದೆಗಳನ್ನು ಪುನರ್ ನಾಮಕರಣ ಮಾಡಲಾಗಿರುವುದರಿಂದ, ಸದರಿ ಸಮಿತಿಗಳಲ್ಲಿ ಅಸ್ತಿತ್ವದಲ್ಲಿರದೇ ಇರುವ ಹುದ್ದೆಗಳನ್ನು ತೆಗೆದು ಹೊಸ ಹುದ್ದೆಗಳನ್ನು ನಾಮಕರಣ ಮಾಡಲು ಸರ್ಕಾರಿ ಆದೇಶ ದಿನಾಂಕ:4.8.2005ನ್ನು ಭಾಗಶಃ ಮಾರ್ಪಡಿಸಿ ಸದರಿ ಸಮಿತಿಗಳನ್ನು ಪುನರ್ ರಚಿಸಲು ಸರ್ಕಾರವು ನಿರ್ಧರಿಸಿರುವ ಕಾರಣ ಈ ಆದೇಶ.

**ಸರ್ಕಾರಿ ಆದೇಶ ಸಂ: ಅಪಜೀ 108 ಎಫ್‌ಎಪಿ 2005, ಬೆಂಗಳೂರು, ದಿನಾಂಕ: 1ನೇ ಜುಲೈ 2006**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನಲೆಯಲ್ಲಿ, ಕರ್ನಾಟಕ ಸ್ವಸ್ಥಿರ ಅರಣ್ಯ ನಿರ್ವಹಣೆ ಮತ್ತು ಜೀವಿವೈವಿಧ್ಯ ಸಂರಕ್ಷಣಾ ಯೋಜನೆಗೆ 2005-06ನೇ ಸಾಲಿನಿಂದ 2012-13ನೇ ಸಾಲಿನವರೆಗೆ ಕರ್ನಾಟಕ ರಾಜ್ಯದ ಎಲ್ಲಾ 27 ಜಿಲ್ಲೆಗಳಲ್ಲಿ 8 ವರ್ಷಗಳ ಅವಧಿಯಲ್ಲಿ ಅನಿಷ್ಠಾನಗೊಳಿಸಲು ಸರ್ಕಾರಿ ಆದೇಶ ದಿನಾಂಕ:4.8.2005 ರನ್ವಯ ರಚಿಸಲ್ಪಟ್ಟ ವೃತ್ತ ಮಟ್ಟದ ಸಲಹಾ ಸಮಿತಿ ಮತ್ತು ಅರಣ್ಯ ವಿಭಾಗೀಯ ಮಟ್ಟದಲ್ಲಿನ ಕಾರ್ಯಕಾರಿ ಸಮಿತಿಗಳನ್ನು ಭಾಗಶಃ ಮಾರ್ಪಡಿಸಿ ಈ ಕೆಳಕಂಡಂತೆ ಸಮಿತಿಗಳನ್ನು ಪುನರ್ ರಚಿಸಿದೆ.

**ವೃತ್ತ ಮಟ್ಟದ ಸಲಹಾ ಸಮಿತಿ**

| ಕ್ರ. ಸಂ. | ಸದಸ್ಯರ ಹೆಸರು | ಹುದ್ದೆಯ ಹೆಸರು |
|---|---|---|
| 1. | ಅರಣ್ಯ ಸಂರಕ್ಷಣಾಧಿಕಾರಿ | ಅಧ್ಯಕ್ಷರು |
| 2. | ಅರಣ್ಯ ಸಂರಕ್ಷಣಾಧಿಕಾರಿ, ಕಾರ್ಯಯೋಜನೆ (ಅಧಿಕಾರಿ ಕ್ಷೇತ್ರದ) | ಸದಸ್ಯರು |
| 3. | ಅರಣ್ಯ ಸಂರಕ್ಷಣಾಧಿಕಾರಿ/ಅರಣ್ಯ ಕೃಷಿಕರು (ಅಧಿಕಾರಿ ಕ್ಷೇತ್ರದ) | ಸದಸ್ಯರು |
| 4. | ಜಿಲ್ಲಾಧಿಕಾರಿಗಳು (ಅಧಿಕಾರಿ ಕ್ಷೇತ್ರದ) | ಸದಸ್ಯರು |
| 5. | ಮುಖ್ಯ ಕಾರ್ಯನಿರ್ವಹಕ ಅಧಿಕಾರಿಗಳೂ ಜಿಲ್ಲಾ ಪಂಚಾಯತ್ (ಅಧಿಕಾರಿ ಕ್ಷೇತ್ರ) | ಸದಸ್ಯರು |
| 6. | ಉಪ ಅರಣ್ಯ ಸಂರಕ್ಷಣಾಧಿಕಾರಿಗಳು (ಪ್ರಾದೇಶಿಕ) | ಸದಸ್ಯರು |
| 7. | ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, /ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ (ವನ್ಯಜೀವಿ) | ಸದಸ್ಯರು |
| 8. | ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಸಾಮಾಜಿಕ ಅರಣ್ಯ | ಸದಸ್ಯರು |
| 9. | ಅರಣ್ಯ ಸಂರಕ್ಷಣಾಧಿಕಾರಿಯವರ ತಾಂತ್ರಿಕ ಸಹಾಯಕರು | ಸದಸ್ಯ ಕಾರ್ಯದರ್ಶಿ |
| 10. | ಕೃಷಿ ವಿಶ್ವವಿದ್ಯಾನಿಲಯ ಪ್ರತಿನಿಧಿ | ಸದ್ಯಸರು |
| 11. | ಸ್ಥಳೀಯ ವಿಶ್ವವಿದ್ಯಾನಿಲಯ ಪ್ರತಿನಿಧಿ | ಸದ್ಯಸರು |
| 12. | ಇಬ್ಬರು ಸರ್ಕಾರೇತರ ಸಂಸ್ಥೆಯ ಸದಸ್ಯರು (ಸರ್ಕಾರದಿಂದ ನಾಮನಿರ್ದೇಶಿತ) | ಸದಸ್ಯರು |
| 13. | ಇಬ್ಬರು ಅಧಿಕಾರೇತರ ಸದಸ್ಯರು (ಸರ್ಕಾರದಿಂದ ನಾಮನಿರ್ದೇಶಿತ) | ಸದಸ್ಯರು |
| 14. | ಬಿದಿರು ಬಳಕೆದಾರರ (ಮೇದಾರ್) ಸಂಘದ ಪ್ರತಿನಿಧಿ | ಸದಸ್ಯರು |
| 15. | ಅಗರಬತ್ತಿ ಉದ್ಯಮ ಸಂಘದ ಪ್ರತಿನಿಧಿ | ಸದಸ್ಯರು |
| 16. | ಸುಣ್ಣ, ಇಟ್ಟಿಗೆ ಮತ್ತು ಹೆಂಚು ತಯಾರಿಸುವ ಕಂಪನಿಗಳ ಪ್ರತಿನಿಧಿ | ಸದಸ್ಯರು |

**ವಿಭಾಗೀಯ ಮಟ್ಟದ ಕಾರ್ಯಕಾರಿ ಸಮಿತಿ**

| ಕ್ರ. ಸಂ. | ಸದಸ್ಯರ ಹೆಸರು | ಹುದ್ದೆಯ ಹೆಸರು |
|---|---|---|
| 1. | ಉಪ ಅರಣ್ಯ ಸಂರಕ್ಷಣಾಧಿಕಾರಿ (ಪ್ರಾದೇಶಿಕ) | ಅಧ್ಯಕ್ಷರು |
| 2. | ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಮಾಜಿಕ ಅರಣ್ಯ | ಸದಸ್ಯರು |
| 3. | ಉಪ ಅರಣ್ಯ ಸಂರಕ್ಷಣಾಧಿಕಾರಿಗಳು/ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ (ವನ್ಯಜೀವಿ) | ಸದಸ್ಯರು |
| 4. | ಉಪ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಕಲ್ಯಾಣ ಇಲಾಖೆ | ಸದಸ್ಯರು |
| 5. | ಜಂಟಿ ನಿರ್ದೇಶಕರು/ಉಪ ನಿರ್ದೇಶಕರು, ಕೃಷಿ ಇಲಾಖೆ | ಸದಸ್ಯರು |
| 6. | ಉಪ ನಿರ್ದೇಶಕರು, ಪಶುಸಂಗೋಪನೆ ಮತ್ತು ಪಶುವಿಜ್ಞಾನ | ಸದಸ್ಯರು |
| 7. | ಉಪ ನಿರ್ದೇಶಕರು, ರೇಷ್ಮೆ ಇಲಾಖೆ | ಸದಸ್ಯರು |
| 8. | ಜಿಲ್ಲಾ ಜಲಾಯನ ಅಭಿವೃದ್ಧಿ ಅಧಿಕಾರಿ | ಸದಸ್ಯರು |
| 9. | ಉಪ ವಿಭಾಗಾಧಿಕಾರಿ (ಅಧಿಕಾರಿ ಕ್ಷೇತ್ರದ) | ಸದಸ್ಯರು |
| 10. | ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ ಮತ್ತು ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ತಾಂತ್ರಿಕ ಸಹಾಯಕರು | ಸದಸ್ಯ ಕಾರ್ಯದರ್ಶಿ |
| 11. | ಇಬ್ಬರು ಸ್ಥಳೀಯ ಸಮುದಾಯ ಸದಸ್ಯರು (ಅರಣ್ಯ ಸಂರಕ್ಷಣಾಧಿಕಾರಿಯವರಿಂದ ನಾಮನಿರ್ದೇಶಿತ) | ಸದಸ್ಯರು |
| 12. | ಒಬ್ಬರು ಅಗರಬತ್ತಿ/ಹೆಂಚು/ಸುಣ್ಣ/ ಹೊಗೆಸೊಪ್ಪು/ಇಟ್ಟಿಗೆ ಉದ್ಯಮ ಸಂಘದ ಸದಸ್ಯರು | ಸದಸ್ಯರು |
| 13. | ಎಫ್.ಆರ್.ಎಲ್.ಹೆಚ್.ಟಿ ಯವರು ರಚಿಸಿದ ಎಂ.ಪಿ.ಡಿ.ಎ. ಸದಸ್ಯರು | ಸದಸ್ಯರು |
| 14. | ಸ್ಥಳೀಯ ನಾಟಿ ವೈದ್ಯರು ಮತ್ತು ಆಯುರ್ವೇದ ವೈದ್ಯರು | ಸದಸ್ಯರು |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಆರ್. ವತ್ಸಲ**

ಪಿ.ಆರ್. 1045

ಸರ್ಕಾರದ ಅಧೀನ ಕಾರ್ಯದರ್ಶಿ,

ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

**FOREST, ECOLOGY AND ENVIRNMENT SECRETARIAT**

**Sub:** Diversion of 0.715 ha. of forest land for drawing 33/11 KV line in Kodambettu Block, Bantwala range, Mangalore Division.

**Read:**
1. Letter No. A5 (3) GFL-CR-10/2005-06, dated:25.3.2006 of Principal Chief Conservator of Forests, Bangalore.
2. Letter No. F.No. 11-9/98-FC,dated:3.1.2005 of Government of India, Ministry of Environment and Forest,New Delhi.

**PREAMBLE:**

The Principal Chief Conservator of Forest, Bangalore vide his letter dated 25.3.2006 read at (1) above has submitted a proposal for diversion of 0.715 ha. off forest land for drawing 33KVsingle circuit line by tapping from the existing 33 KVBC road to a distance of 8.89 Kms. to establish 1.5 M.V.A., 33/11 KV sub station at Kukkipady in Dakshina Kannada under the Forest (Conservation) Act 1980.

The Government of India,Ministry of Environment and Forests,New Delhi vide their letter dated :3.1.2005 read at (2) above has conveyed general approval under Section 2 of Forest (Conservation)Act, 1980 for diversion of land to Government Departments for certain activities. It is proposed to consider the proposal of the Principal Chief Conservator of Forests under the general approval accored by Government of India.

Hence the order.

**Government Order No. FEE 46 FGL 2006, Bangalore, Dated: 22nd June 2006**

In the circumstances explained in the preamble and in accordance with the approval of Government of India in the letter dated:3.1.2005, the Government of Karnataka are pleased to accord approval under section (2) of Forest (Conservation) Act, 1980 for diversion of 0.715 ha.of forest land in Kodambettu Block, Bantwala range, Mangalore Division for drawing 33 KV single circuit line by tapping from the existing 33 KV BC road to a distance of 8.89 Kms. to establish 1.5 M.V.S., 33/11KV sub station at Kukkipady in Dakshina Kannada under the Forest (Conservation) Act 1980 in favour of MESCOM Limited subject to the following conditions.

1. The legal status of forest land will continue to be as forest land.
2. The land shall be utilized only for the purpose for which it is released.
3. The user agency has to pay the lease rent as fixed by the Government at the time of sanction and any subsequent orders in this regard.
4. In case the land is not used for the stipulated purpose or when it is no longer needed for the stipulated purposes the area should automatically revert back to the Forest Department.
5. Karnataka Forest Act 1963 and Rules 1969 will be applicable for any violation.
6. If the lands is not utilized for the purpose within 2 years, and also if any violation is found of the stipulated conditions, the forest land shall be forfeited to Department after due approval from Government by the Conservator of Forests under section 82(read with section 69 of Karnataka Forest Rules) of Karnataka Forest Act 1963.
7. Only minimum number of trees shall be cut based on actual requirement of the project.
8. The user agency shall pay the extraction and transportation charges of tress to be cut if any, as estimated by the Deputy Conservator of Forests from the proposed land.
9. Compensatory afforestation shall be raised at the cost of user agency over 1.5 ha. of degraded forest land at the rate prevailing at the time of approval.
10. The user agency shall pay the Net present Value as per the Government Notification dated 17.1.2004, @ Rs. 5.80 to Rs. 9.20 lakhs per ha. depending upon the quantity and density of the land as determined by Conservator of Forests, Mangalore.
11. Any other condition imposed by the Government of India/Government of Karnataka and Prinicipal Chief Conservator of Forests, will have to be abided by the lessee.

By Order and in the name of the Governor of Karnataka,

**S.R. VATSALA**

Under Secretary to Government,

Forest, Ecology and Environment Department.

P.R. 1046

**ಕಂದಾಯ ಸಚಿವಾಲಯ**

**ವಿಷಯ:** ಕೊಲ್ಲೂರು ಶ್ರೀ ಮೂಕಾಂಬಿಕಾ ದೇವಸ್ಥಾನದ ಆಡಳಿತ ಮಂಡಳಿಯ ವಿರುದ್ಧದ ದೂರುಗಳ ಬಗ್ಗೆ ವಿಚಾರಣೆ ಜರುಗಿಸುವ ಕುರಿತು.

**ಓದಲಾಗಿದೆ:**

1. ಶ್ರೀ ಕೆ. ಗೋಪಾಲ ಪೂಜಾರಿ,ಶಾಸಕರು, ಬೈಂದೂರು ವಿಧಾನ ಸಭಾ ಕ್ಷೇತ್ರ ಉಡುಪಿ ಜಿಲ್ಲೆ ಇವರ ದಿನಾಂಕ: 24.1.2005ರ ದೂರು ಅರ್ಜಿ.
2. ಮಾನ್ಯ ಮುಖ್ಯಮಂತ್ರಿಯವರ ಪ್ರಧಾನ ಕಾರ್ಯದರ್ಶಿರವರ ದಿನಾಂಕ:7.3.2006ರ ಟಿಪ್ಪಣಿ ಸಂಖ್ಯೆ:ಪಿಎಸ್‌ಸಿಎಂ/ 843/2005.

3. ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿನ ರಿಟ್ ಅರ್ಜಿ ಸಂಖ್ಯೆ:3368/2006 (ಪಿಐಎಲ್)ರ ಬಗ್ಗೆ ಪ್ರಧಾನ ಸರ್ಕಾರಿ ವಕೀಲರು, ಕರ್ನಾಟಕ ಉಚ್ಚ ನ್ಯಾಯಾಲಯ ಇವರ ದಿನಾಂಕ:27.6.2006ರ ಪತ್ರ.
4. ಸರ್ಕಾರದ ಪ್ರಧಾನ ಕಾರ್ಯದರ್ಶಿ, ಕಂದಾಯ ಇಲಾಖೆ ಇವರ ದಿನಾಂಕ:27.6.2006ರ ಅನಧಿಕೃತ ಟಿಪ್ಪಣಿ ಸಂ. ಆರ್‌ಡಿ/23/ಮುಸರ/2005.

**ಪ್ರಸ್ತಾವನೆ:**

ಕೊಲ್ಲೂರು ಶ್ರೀ ಮೂಕಾಂಬಿಕಾ ದೇವಾಲಯದ ಆಡಳಿತ ಮಂಡಳಿಯ ವಿರುದ್ಧ ಅನೇಕ ಆಪಾದನೆಗಳನ್ನು ಮಾಡಿ,ಸದರಿ ಆಡಳಿತ ಮಂಡಳಿಯ ವಿರುದ್ಧ ವಿಚಾರಣೆ ಜರುಗಿಸುವಂತೆ ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ:24.1.2005ರ ದೂರು ಅರ್ಜಿಯನ್ನು ಬೈಂದೂರು ವಿಧಾನ ಸಭಾ ಕ್ಷೇತ್ರದ ಶಾಸಕರಾದ ಶ್ರೀ ಕೆ. ಗೋಪಾಲ ಪೂಜಾರಿಯವರು ಮಾನ್ಯ ಮುಖ್ಯಮಂತ್ರಿಯವರಿಗೆ ಸಲ್ಲಿಸಿರುತ್ತಾರೆ. ಅದರಂತೆ ಕೊಲ್ಲೂರು ಮೂಕಾಂಬಿಕಾ ದೇವಾಲಯದ ಆಡಳಿತ ಮಂಡಳಿಯ ಅವ್ಯವಹಾರಗಳ ಬಗ್ಗೆ ವಿಚಾರಣೆ ಜರುಗಿಸಿ, ವರದಿ ನೀಡುವಂತೆ ಶ್ರೀ ವಿ.ಪಿ. ಬಳಿಗಾರ್, ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರನ್ನು ನೇಮಕ ಮಾಡಲು ಅಂದಿನ ಮಾನ್ಯ ಮುಖ್ಯಮಂತ್ರಿರವರು ಆದೇಶಿಸಿರುತ್ತಾರೆಂದು ಹಾಗು ಅದರಂತೆ ಕ್ರಮ ಕೈಗೊಳ್ಳಲು ಮಾನ್ಯ ಮುಖ್ಯಮಂತ್ರಿಯವರ ಪ್ರಧಾನ ಕಾರ್ಯದರ್ಶಿಯವರು ತಮ್ಮ ದಿನಾಂಕ:29.1.2005ರ ಟಿಪ್ಪಣಿಯಲ್ಲಿ ಅಪೇಕ್ಷಿಸಿರುತ್ತಾರೆ. ಆದರೆ, 1997ರ ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಅಧಿನಿಯಮದಡಿ ಶ್ರೀ ವಿ.ಪಿ.ಬಾಳಿಗಾರ್, ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯವರನ್ನು ವಿಚಾರಣಾಧಿ ಕಾರಿಯನ್ನಾಗಿ ನೇಮಿಸಲು ಅವಕಾಶವಿರುವುದಿಲ್ಲವೆಂದು ಅಂದಿನ ಮಾನ್ಯ ಕಂದಾಯ ಸಚಿವರು ಮಾನ್ಯ ಮುಖ್ಯಮಂತ್ರಿಗಳ ಗಮನಕ್ಕೆ ತಂದಿದ್ದರ ಮೇರೆಗೆ ಮಾನ್ಯ ಮುಖ್ಯಮಂತ್ರಿಯವರು ಈ ಪ್ರಕರಣದಲ್ಲಿ ಧಾರ್ಮಿಕ ದತ್ತಿ ಆಯುಕ್ತರವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲು ದಿನಾಂಕ: 21.2.2005 ರಂದು ಆದೇಶಿಸಿರುತ್ತಾರೆ. ಆದರೆ, ಕಾರಣಾಂತರಗಳಿಂದ ಧಾರ್ಮಿಕ ದತ್ತಿ ಆಯುಕ್ತರು ಈ ಪ್ರಕರಣದಲ್ಲಿ ವಿಚಾರಣೆಯನ್ನು ಜರುಗಿಸಲು ಸಾಧ್ಯವಾಗಲಿಲ್ಲ ವಾದುದರಿಂದ ಪುನಃ ಶ್ರೀ ಎಸ್.ಎಂ. ಜಾಮ್‌ದಾರ್ ಅಂದಿನ ಕಾರ್ಯದರ್ಶಿಗಳು ಹಾಲಿ ಪ್ರಧಾನ ಕಾರ್ಯದರ್ಶಿಗಳು,ಕಂದಾಯ ಇಲಾಖೆಯವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸುವಂತೆ ಅಂದಿನ ಮಾನ್ಯ ಮುಖ್ಯಮಂತ್ರಿಯವರು ಆದೇಶಿಸಿರುತ್ತಾರೆ ಎಂದು ಹಾಗೂ ಸದರಿ ಆದೇಶದಂತೆ ಸೂಕ್ತ ಕ್ರಮ ಕೈಗೊಳ್ಳುವಂತೆ ಮಾನ್ಯ ಮುಖ್ಯಮಂತ್ರಿಯವರ ಪ್ರಧಾನ ಕಾರ್ಯದರ್ಶಿಯವರು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ7.3.2005ರ ಟಿಪ್ಪಣಿಯಲ್ಲಿ ಸರ್ಕಾರದ ಮುಖ್ಯ ಕಾರ್ಯದರ್ಶಿಯವರನ್ನು ಕೋರಿರುತ್ತಾರೆ.

ಆದರೆ ಈ ಬಗ್ಗೆ ಮುಖ್ಯ ಕಾರ್ಯದರ್ಶಿಯವರ ಕಛೇರಿಯಿಂದ ಯಾವುದೇ ಮಾಹಿತಿಯು ಕಂದಾಯ ಇಲಾಖೆಗೆ ಇಲ್ಲದಿದ್ದುದರಿಂದ ಈ ವಿಚಾರದಲ್ಲಿ ಕಂದಾಯ ಇಲಾಖೆಯ ವತಿಯಿಂದ ಯಾವುದೇ ಕ್ರಮ ಜರುಗಿಸಲಾಗಿರುವುದಿಲ್ಲ. ಏತನ್ಮಧ್ಯೆ, ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿನ ರಿಟ್ ಅರ್ಜಿ ಸಂಖ್ಯೆ:3368/2006ರ ಸಾರ್ವಜನಿಕ ಹಿತಾಸಕ್ತಿ ಅರ್ಜಿಯ ವಿಚಾರಣೆಯು ನ್ಯಾಯಾಲಯದ ಮುಂದೆ ವಿಚಾರಣೆಗೆ ಬಂದಿದ್ದ ಸಮಯದಲ್ಲಿ ಈ ಪ್ರಕರಣದಲ್ಲಿ ಕಂದಾಯ ಕಾರ್ಯದರ್ಶಿಯವರಿಂದ ವಿಚಾರಣೆ ಜರುಗಿಸುವಂತೆ ಮಾನ್ಯ ಮುಖ್ಯಮಂತ್ರಿಯವರು ಆದೇಶಿಸಿ ಒಂದು ವರ್ಷ ಮೇಲ್ಪಟ್ಟಿದ್ದರೂ ಸಹ ಯಾವುದೇ ಕ್ರಮ ಕೈಗೊಳ್ಳದಿರುವುದನ್ನು ನ್ಯಾಯಾಲಯವು ಗಂಭೀರವಾಗಿ ಪರಿಗಣಿಸಿ, ಇನ್ನು ವಿಳಂಬ ಮಾಡದೇ ಶ್ರೀ ಎಸ್.ಎಂ. ಜಾಮ್ ದಾರ್, ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಕಂದಾಯ ಇಲಾಖೆ ಇವರಿಂದ ಎರಡು ತಿಂಗಳೊಳಗಾಗಿ ವಿಚಾರಣೆ ಜರುಗಿಸುವಂತೆ ದಿನಾಂಕ:27.6.2006ರಂದು ಆದೇಶಿಸಿರುವುದಾಗಿ ಕರ್ನಾಟಕ ಉಚ್ಚ ನ್ಯಾಯಾಲಯದ ಪ್ರಧಾನ ಸರ್ಕಾರಿ ವಕೀಲರು ಮೇಲೆ ಕ್ರಮ ಸಂಖ್ಯೆ:(3)ರಲ್ಲಿ ಓದಲಾದ ಪತ್ರದಲ್ಲಿ ತಿಳಿಸಿರುತ್ತಾರೆ.

ಸದರಿ ಪತ್ರದ ಮೇರೆಗೆ ತಮ್ಮನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿ, ಆದೇಶಿಸುವಂತೆ ಮೇಲೆ ಕ್ರಮ ಸಂಖ್ಯೆ:(4)ರಲ್ಲಿ ಓದಲಾದ ದಿನಾಂಕ: 27.6.2006ರ ಟಿಪ್ಪಣಿಯಲ್ಲಿ ಕಂದಾಯ ಇಲಾಖೆಯ ಪ್ರಧಾನ ಕಾರ್ಯದರ್ಶಿಯವರು ಅಪೇಕ್ಷಿಸಿರುತ್ತಾರೆ.

ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಅಧಿನಿಯಮ, 1997ರ 50ನೇ ಪ್ರಕರಣದಂತೆ "ಆಯುಕ್ತ ಅಥವಾ ಉಪ ಆಯುಕ್ತ ಅಥವಾ ಸಹಾಯಕ ಆಯುಕ್ತನು ಸ್ವತಃ ತಾನೇ ಅಥವಾ ಅಧಿಸೂಚಿತ ಸಂಸ್ಥೆ ಅಥವಾ ಘೋಷಿತ ಸಂಸ್ಥೆಯ ಸಂಬಂಧದಲ್ಲಿ ಹಿತಾಸಕ್ತಿಯನ್ನು ಹೊಂದಿರುವ ಯಾವೊಬ್ಬ ವ್ಯಕ್ತಿಯಿಂದ ಲಿಖಿತ ದೂರನ್ನು ಸ್ವೀಕರಿಸಿದ ಮೇಲೆ ಸಾಮಾನ್ಯ ಅಥವಾ ಯಾವುದೇ ನಿರ್ದಿಷ್ಟ ಉದ್ದೇಶಕ್ಕಾಗಿ ಒಂದು ಸಂಸ್ಥೆಗೆ ಸಂಬಂಧಿಸಿದಂತೆ ವಿಚಾರಣೆಯನ್ನು ಪ್ರಾರಂಭಿಸಬಹುದು" ಎಂದಿರುತ್ತದೆ. ಆದರೆ, ಈ ಪ್ರಕರಣದಲ್ಲಿ ಸರ್ಕಾರದ ಪ್ರಧಾನ ಕಾರ್ಯದರ್ಶಿಯವರಾದ ಶ್ರೀ ಎಸ್. ಎಂ. ಜಾಮ್‌ದಾರ್‌ರವರಿಂದ ವಿಚಾರಣೆ ಜರುಗಿಸುವಂತೆ ಅಂದಿನ ಮಾನ್ಯ ಮುಖ್ಯಮಂತ್ರಿಯವರು ಹಾಗೂ ಕರ್ನಾಟಕ ಉಚ್ಚ ನ್ಯಾಯಾಲಯ ಆದೇಶಿಸಿರುವ ಮೇರೆಗೆ ಇದೊಂದು ವಿಶೇಷ ಪ್ರಕರಣವೆಂದು ಭಾವಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಕಂಇ 23 ಮುದಾಪ್ರ 2006, ಬೆಂಗಳೂರು, ದಿನಾಂಕ: 3ನೇ ಜುಲೈ 2006**

ಪ್ರಸ್ತಾವನೆಯಲ್ಲಿ ಕೂಲಂಕಷವಾಗಿ ಪರಿಶೀಲಿಸಿರುವ ಹಿನ್ನೆಲೆಯಲ್ಲಿ ಕೊಲ್ಲೂರು ಶ್ರೀ ಮೂಕಾಂಬಿಕಾ ದೇವಸ್ಥಾನದ ಆಡಳಿತ ಮಂಡಳಿಯ ವಿರುದ್ಧ ಬಂದಿರುವ ದೂರುಗಳ ಬಗ್ಗೆ ವಿಚಾರಣೆ ಜರುಗಿಸಲು ಶ್ರೀ ಎಸ್.ಎಂ. ಜಾಮ್‌ದಾರ್ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಕಂದಾಯ ಇಲಾಖೆ ಇವರನ್ನು ವಿಚಾರಣಾಧಿಕಾರಿಗಳನ್ನಾಗಿ ನೇಮಿಸಿದೆ.

ಈ ವಿಚಾರಣೆಗೆ ಸಂಬಂಧಿಸಿದ ದಾಖಲಾತಿಗಳನ್ನು ಧಾರ್ಮಿಕ ದತ್ತಿ ಇಲಾಖೆಯ ಆಯುಕ್ತರ ಕಛೇರಿಯಿಂದ ಹಾಗೂ ಕೊಲ್ಲೂರು ಶ್ರೀ ಮೂಕಾಂಬಿಕಾ ದೇವಾಲಯದ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳ ಕಛೇರಿಯಿಂದ ವಿಚಾರಣಾಧಿಕಾರಿಗಳಿಗೆ ಒದಗಿಸತಕ್ಕದ್ದು

ವಿಚಾರಣಾಧಿಕಾರಿಗಳು ವಿಚಾರಣೆಯನ್ನು ಎರಡು ತಿಂಗಳೊಳಗಾಗಿ ಜರುಗಿಸಿ, ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಜಯಚಂದ್ರ**

ಪೀಠಾಧಿಕಾರಿ,

ಕಂದಾಯ ಇಲಾಖೆ. (ಮುಜರಾಯಿ)

ಪಿ.ಆರ್. 1048

**ವಿಷಯ:** ಶ್ರೀ ವಿದ್ಯಾಗಣಪತಿ ಎಜುಕೇಷನ್ ಸೊಸೈಟಿ, ಕೇರಳಾಪುರ, ಅರಕಲಗೂಡು ತಾಲ್ಲೂಕು, ಹಾಸನ ಜಿಲ್ಲೆ ಈ ಸಂಸ್ಥೆಗೆ ನೇಮಕ ಮಾಡಲಾಗಿರುವ ಆಡಳಿತಾಧಿಕಾರಿ ಅವಧಿಯನ್ನು ವಿಸ್ತರಿಸುವ ಕುರಿತು.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ:ಕಂಇ 77 ಮುನೊಸೊ 1999, ದಿನಾಂಕ:10.4.2000.
2. ಉಪ ವಿಭಾಧಿಕಾರಿಗಳು, ಸಕಲೇಶಪುರ ಉಪ ವಿಭಾಗ, ಹಾಗೂ ಆಡಳಿತಾಧಿಕಾರಿಗಳು ಶ್ರೀ ವಿದ್ಯಾಗಣಪತಿ ಎಜುಕೇಷನ್ ಸೊಸೈಟಿ, ಕೇರಳಾಪುರ ಇವರ ಪತ್ರ ಸಂಖ್ಯೆ:ಭೂಸು /7/05-06, ದಿನಾಂಕ:6.4.2006.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ಶ್ರೀ ವಿದ್ಯಾಗಣಪತಿ ಎಜುಕೇಷನ್ ಸೊಸೈಟಿ, ಕೇರಳಾಪುರ, ಅರಕಲಗೂಡು ತಾಲ್ಲೂಕು, ಹಾಸನ ಜಿಲ್ಲೆ, ಈ ಸಂಸ್ಥೆಗೆ ಸಂಸ್ಥೆಯ ಅವ್ಯವಹಾರಗಳನ್ನು ಸರಿಪಡಿಸಿ ಸಮಸ್ಥೆಗೆ ಚುನಾವಣೆ ನಡೆಸಿ, ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರಿ ಹಸ್ತಾಂತರಿಸಲು ಆಡಳಿತಾಧಿಕಾರಿಯನ್ನು ನೇಮಿಸಲಾಗಿದ್ದು, ಸದರಿ ಆಡಳಿತಾಧಿಕಾರಿಯ ಅವಧಿಯನ್ನು ಕಾಲಕಾಲಕ್ಕೆ ವಿಸ್ತರಿಸಲಾಗಿದೆ. ಮೇಲೆ ಓದಲಾದ (2)ರ ಪತ್ರದಲ್ಲಿ ಆಡಳಿತಾಧಿಕಾರಿಗಳು, ಪ್ರಸ್ತಾವನೆ ಸಲ್ಲಿಸಿ ಪ್ರಸುತ್ತ ಸಂಸ್ಥೆಗೆ ಚುನಾವಣೆ ನಡೆಸಬೇಕಾದಲ್ಲಿ ಸಹಕಾರ ಕಾಯ್ದೆಗಳನ್ವಯ ಷೇರುದಾರರಿಂದ ಆಡಳಿತ ಮಂಡಳಿಯ ಚುನಾವಣೆ ಪ್ರಕ್ರಿಯೆ ನಡೆಸಬೇಕಾಗಿರುತ್ತದೆ,. ಆದ್ದರಿಂದ ಸಂಸ್ಥೆಗೆ ಚುನಾವಣೆ ನಡೆಸುವುದು ಸಾಧ್ಯಬಾಗಿಲ್ಲವಾದ್ದರಿಂದ ಅವಧಿ ವಿಸ್ತರಿಸುವಂತೆ ಕೋರಿದ್ದಾರೆ. ಆಡಳಿತಾಧಿಕಾರಿಯ ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಆಡಳಿತಾಧಿಕಾರಿ ಅವಧಿಯನ್ನು ವಿಸ್ತರಿಸಲು ತೀರ್ಮಾನಿಸಿದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ:ಕಂಇ 49 ಮುನೊಸೊ 2004, ಬೆಂಗಳೂರು, ದಿನಾಂಕ:3ನೇ ಜುಲೈ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 27-ಎ ಪ್ರಕಾರ ಶ್ರೀ ವಿದ್ಯಾಗಣಪತಿ ಎಜುಕೇಷನ್ ಸೊಸೈಟಿ, ಕೇರಳಾಪುರ, ಅರಕಲಗೂಡು ತಾಲ್ಲೂಕು, ಹಾಸನ ಜಿಲ್ಲೆ, ಈ ಸಂಸ್ಥೆಗೆ ನೇಮಕ ಮಾಡಲಾಗಿರುವ ಆಡಳಿತಾಧಿಕಾರಿ ಅವಧಿಯನ್ನು ದಿನಾಂಕ:10.1.2006ರಿಂದ 9.5.2006 ಮತ್ತು 10.5.2006ರಿಂದ 9.9.2006ರ ಅವಧಿಗೆ ಅಥವಾ ಸಂಸ್ಥೆಗೆ ಚುನಾವಣೆ ನಡೆಸಿ, ನೂತನ ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವವರೆಗೆ ಅಥವಾ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ವಿಸ್ತರಿಸಿ ಆದೇಶಿಸಿದೆ.

ಆಡಳಿತಾಧಿಕಾರಿಯವರು ವಿಸ್ತರಣಾ ಅವಧಿಯೊಳಗಾಗಿ ಕಡ್ಡಾಯವಾಗಿ ಸಂಸ್ಥೆಗೆ ಚುನಾವಣೆ ನಡೆಸಿ, ಚುನಾಯಿತ ನೂತನ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವಂತೆ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಶಿವಲಿಂಗ**
ಪೀಠಾಧಿಕಾರಿ,
ಕಂದಾಯ ಇಲಾಖೆ. (ನೋಂದಣಿ ಮತ್ತು ಮುದ್ರಾಂಕ)

ಪಿ.ಆರ್. 1049

## ಇಂಧನ ಸಚಿವಾಲಯ

**ವಿಷಯ:** M/s Photon Energy Systems Limited ಕಂಪನಿಗೆ ಹಂಚಿಕೆಯಾಗಿರುವ 3 ಬೇರೆ ಬೇರೆ ಕಿರು ಜಲ ವಿದ್ಯುತ್ ಯೋಜನೆಗಳನ್ನು ರದ್ದು ಪಡಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಡಿಇ 66 ಎನ್‌ಸಿಇ 2001 (1) ದಿನಾಂಕ:29.11.2001.
2. ಸರ್ಕಾರಿ ಆದೇಶ ಸಂಖ್ಯೆ:ಡಿಇ 66 ಎನ್‌ಸಿಇ 2001(2) ದಿನಾಂಕ:29.11.2001
3. ಸರ್ಕಾರ ಆದೇಶ ಸಂಖ್ಯೆ:ಡಿಇ 66 ಎನ್‌ಸಿಇ 2001(3) ದಿನಾಂಕ:29.11.2001
4. ಇಂಧನ ಇಲಾಖೆಯಿಂದ ಕಾರಣ ಕೇಳಿ ನೀಡಿರುವ ನೋಟೀಸು ಸಂಖ್ಯೆ: ಇಎನ್ 357 ಎನ್‌ಸಿಇ 2005 ದಿನಾಂಕ: 27.12.2005.

**ಪ್ರಸ್ತಾವನೆ:**

ಓದಲಾದ (1), (2) ಮತ್ತು (3) ರ ಆದೇಶದಲ್ಲಿ M/s Photon Energy Systems Limited ಕಂಪನಿಗೆ ಅನುಕ್ರಮವಾಗಿ 3.5 ಮೆಗಾ ವ್ಯಾಟ್ ಸಾಮರ್ಥ್ಯದ ಸಂಪೆಕಟ್ಟೆ ಕಿರು ಜಲ ವಿದ್ಯುತ್ ಯೋಜನೆ (ಶಿವಮೊಗ್ಗ ಜಿಲ್ಲೆಯ ಹೊಸನಗರ ತಾಲ್ಲೂಕು), 0.5 ಮೆಗಾ ವ್ಯಾಟ್ ಸಾಮರ್ಥ್ಯದ ಹೊಸಹೊಳಲು ಕಿರು ಜಲ ವಿದ್ಯುತ್ ಯೋಜನೆ (ಮಂಡ್ಯ ಜಿಲ್ಲೆಯ ಕೆ.ಆರ್. ಪೇಟೆ ತಾಲ್ಲೂಕು ಹೊಸಹೊಳಲು ಗ್ರಾಮ) ಮತ್ತು 1.00 ಮೆಗಾ ವ್ಯಾಟ್ ಸಾಮರ್ಥ್ಯದ ಯಗಚಿ ಕಿರು ಜಲ ವಿದ್ಯುತ್ ಯೋಜನೆ (ಹಾಸನ ಜಿಲ್ಲೆಯ ಬೇಲೂರು ಪಟ್ಟಣದ ಯಗಚಿ ನದಿ)ಗಳನ್ನು ಹಂಚಿಕೆ ಮಾಡಲಾಗಿತ್ತು.

ಯೋಜನೆಯ ಅನುಷ್ಠಾನದ ನಿಟ್ಟಿನಲ್ಲಿ M/s Photon Energy Systems Limited ಈ ಕಂಪನಿಗೆ ಯೋಜನೆಗಳ ಹಂಚಿಕೆಯಾಗಿ 4 ವರ್ಷಗಳು ಕಳೆದರೂ ಯಾವುದೇ ಪ್ರಗತಿ ಮಾಡಿಕೊಂಡಿರುವುದಿಲ್ಲ ಹಾಗೂ ಪ್ರಗತಿಯನ್ನು ಸಾಧಿಸುವುದರಲ್ಲಿ ಯಾವುದೇ ಕ್ರಮ ತೆಗೆದುಕೊಂಡಿರುವುದಿಲ್ಲವೆಂದು ಓದಲಾದ (4)ರ ನೋಟೀಸಿನಲ್ಲಿ ಯೋಜನೆಗಳ ಹಂಚಿಕೆಯನ್ನು ಏಕೆ ರದ್ದು ಮಾಡಬಾರದೆಂದು? ಕೋರಿ ಕಾರಣಗಳನ್ನು ಕೇಳಲಾಗಿತ್ತು.

M/s Photon Energy Systems Limited ಕಂಪನಿಯು ಕಾರಣ ಕೇಳುವ ನೋಟೀಸಿಗೆ ಸ್ಪಂದಿಸಿರುವುದಿಲ್ಲ. ಆದ್ದರಿಂದ ಸದರಿ ಅಭಿವೃದ್ಧಿದಾರರಿಗೆ ಯೋಜನೆಯ ಅನುಷ್ಠಾನದಲ್ಲಿ ಅಭಿರುಚಿ ಇಲ್ಲವೆಂದು ಭಾವಿಸಲಾಗಿದೆ.

ಇದನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಲಾಗಿದೆ:

**ಸರ್ಕಾರಿ ಆದೇಶ ಸಂಖ್ಯೆ:ಇಎನ್ 357 ಎನ್‌ಸಿಇ 2005, ಬೆಂಗಳೂರು, ದಿನಾಂಕ:1ನೇ ಜುಲೈ 2006**

M/s Photon Energy Systems Limited ಕಂಪನಿಗೆ ಹಂಚಿಕೆ ಮಾಡಲಾಗಿರುವ ಈ ಕೆಳಗಿನ 3 ಯೋಜನೆಗಳನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದು ಪಡಿಸಲಾಗಿದೆ.

| ಕ್ರಮ ಸಂಖ್ಯೆ | ಯೋಜನೆಯ ಹೆಸರು | ಯೋಜನೆಯ ಸ್ಥಳ | ಯೋಜನೆಯ ಸಾಮರ್ಥ್ಯ (ಮೆಗಾ ವ್ಯಾಟ್‌ನಲ್ಲಿ ) |
|---|---|---|---|
| 1. | ಸಂಪೆಕಟ್ಟೆ ಕಿರು ಜಲ ವಿದ್ಯುತ್ ಯೋಜನೆ | ಶಿವಮೊಗ್ಗ ಜಿಲ್ಲೆಯ ಹೊಸನಗರ ತಾಲ್ಲೂಕಿನ ಸಂಪೆಕಟ್ಟೆ ಗ್ರಾಮದ ಬಳಿ | 3.5 |
| 2. | ಹೊಸಹೊಳಲು ಕಿರು ಜಲ ವಿದ್ಯುತ್ ಯೋಜನೆ | ಮಂಡ್ಯ ಜಿಲ್ಲೆಯ ಕೆ.ಆರ್. ಪೇಟೆ ತಾಲ್ಲೂಕಿನ ಹೊಸಹೊಳಲು ಗ್ರಾಮದ ದೊಡ್ಡಕೆರೆ | 0.5 |
| 3. | ಯಹಚಿ ಕಿರು ಜಲ ವಿದ್ಯುತ್ ಯೋಜನೆ | ಹಾಸನ ಜಿಲ್ಲೆಯ ಬೇಲೂರು ಪಟ್ಟಣದ ಯಗಚಿ ನದಿಯ ನೀರಾವರಿ ಕಾಲುವೆ ನೀರನ್ನು ಉಪಯೋಗಿಸಿಕೊಂಡು | 1.00 |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸುರೇಶ್. ಬಿ. ಕೃಷ್ಣಪ್ಪನವರ್**

ಪಿ.ಆರ್. 1050 ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ.

## ವಸತಿ ಸಚಿವಾಲಯ

**ವಿಷಯ:** ಶಿವಮೊಗ್ಗ ಜಿಲ್ಲೆ ಶಿವಮೊಗ್ಗ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ನೇಮಿಸುವ ಬಗ್ಗೆ.

**ಓದಲಾಗಿದೆ:** ಸರ್ಕಾರದ ಆದೇಶ ಸಂ.ವಇ/42/ಹೆಚ್‌ಎಂ/ 1998. ದಿನಾಂಕ:10.4.2000

**ಪ್ರಸ್ತಾವನೆ:**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಉಲ್ಲೇಖಿತ ಆದೇಶದ್ವನ್ವಯ ವಿಧಾನಸಭಾ ಕ್ಷೇತ್ರವಾರು ಪುನರ್ ರಚಿಸಲು ತೀರ್ಮಾನಿಸಿದ್ದು, ಶಿವಮೊಗ್ಗ ಜಿಲ್ಲೆ ಶಿವಮೊಗ್ಗ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ:ವಇ/32/ಹೆಚ್‌ಎಎಸ್ 2006, ಬೆಂಗಳೂರು, ದಿನಾಂಕ:1ನೇ ಜುಲೈ 2006**

ಮೇಲ್ಕಂಡ ಸಂದರ್ಭದಲ್ಲಿ ಶಿವಮೊಗ್ಗ ಜಿಲ್ಲೆ ಶಿವಮೊಗ್ಗ ನಗರ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆಶ್ರಯ ಸಮಿತಿಯನ್ನು ಪುನರ್ ರಚಿಸಲಾಗಿದೆ.

1. ಶ್ರೀ ಬಿ. ಸತ್ಯನಾರಾಯಣ, ಶ್ವೇತ ನಿಲಯ, 2ನೇ ಕ್ರಾಸ್, ವೆಂಕಟೇಶ ನಗರ, ಶಿವಮೊಗ್ಗ. ಸದಸ್ಯರು
2. ಶ್ರೀಮತಿ ಸೀತಾಲಕ್ಷ್ಮೀ ಮೊಕಮ್ಮನಕೇರಿ, ಸೀಗೆಹಟ್ಟಿ, ಶಿವಮೊಗ್ಗ. ಸದಸ್ಯರು
3. ಶ್ರೀ ವೆಂಕ್ಯಾನಾಯ್ಕ, ಯಶವಂತ ನಿಲಯ, ಮಾಸಾದಿಬೀದಿ, ಮಲವಗೊಪ್ಪ ಶಿವಮೊಗ್ಗ. ಸದಸ್ಯರು

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ಇಂದುಮತಿ**

ಪಿ.ಆರ್. 1051 ಪೀಠಾಧಿಕಾರಿ-2, ವಸತಿ ಇಲಾಖೆ.

**ವಿಷಯ:** ಹಾವೇರಿ ಜಿಲ್ಲೆ, ಹಾನಗಲ್ಲ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ.

**ಓದಲಾಗಿದೆ:** ಸರ್ಕಾರದ ಆದೇಶ ಸಂ.ವಇ/42/ಹೆಚ್‌ಎಂ/ 1998. ದಿನಾಂಕ:10.4.2000

**ಪ್ರಸ್ತಾವನೆ:**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಉಲ್ಲೇಖಿತ ಆದೇಶದ್ವನ್ವಯ ವಿಧಾನಸಭಾ ಕ್ಷೇತ್ರವಾರು ಪುನರ್ ರಚಿಸಲು ತೀರ್ಮಾನಿಸಿದ್ದು, ಹಾವೇರಿ ಜಿಲ್ಲೆ ಹಾನಗಲ್ಲ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ:ವಇ/54/ಹೆಚ್‌ಎಎಸ್ 2006, ಬೆಂಗಳೂರು, ದಿನಾಂಕ:1ನೇ ಜುಲೈ 2006**

ಮೇಲ್ಕಂಡ ಸಂದರ್ಭದಲ್ಲಿ ಹಾವೇರಿ ಜಿಲ್ಲೆ ಹಾನಗಲ್ಲ ನಗರ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆಶ್ರಯ ಸಮಿತಿಯನ್ನು ಪುನರ್ ರಚಿಸಲಾಗಿದೆ.

1. ಶ್ರೀ ಸುರೇಶ್ ಎಚ್. ರಾಯಕರ ಸಾ:ಹಾನಗಲ್ಲ ಹಾನಗಲ್ಲ, ಹಾವೇರಿ ಜಿಲ್ಲೆ. ಅಧ್ಯಕ್ಷರು
2. ಶ್ರೀಕೆ,ಜಿ. ಉಪ್ಪಿನ್ ಸಾ:ಹಾನಗಲ್ಲ ಹಾನಗಲ್ಲ, ಹಾವೇರಿ ಜಿಲ್ಲ್ಗ. ಸದಸ್ಯರು
3. ಶ್ರೀಮತಿ ರತ್ನವ್ವ,ಕೋಂ. ಚನ್ನಬಸಪ್ಪ ಹರಿಜನ ಹಾನಗಲ್ಲ, ಹಾವೇರಿ ಜಿಲ್ಲೆ. ಸದಸ್ಯರು
4. ಶ್ರೀ ದೇವೇಂದ್ರ ಶಿವಪ್ಪ ಬಾಳಂಬೀಡ ಹಾನಗಲ್ಲ, ಹಾವೇರಿ ಜಿಲ್ಲೆ. ಸದಸ್ಯರು
5. ಶ್ರೀ ಕಲ್ಯಾಣ ಕುಮಾರ್ ಶಾಂತಪ್ಪ ಏಟ್ಟರ್ ಹಾನಗಲ್ಲ, ಹಾವೇರಿ ಜಿಲ್ಲೆ. ಸದಸ್ಯರು

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ಇಂದುಮತಿ**

ಪಿ.ಆರ್. 1052 ಪೀಠಾಧಿಕಾರಿ-2, ವಸತಿ ಇಲಾಖೆ.

**ವಿಷಯ:** ತುಮಕೂರು ಜಿಲ್ಲೆ, ಶಿರಾ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ.

**ಓದಲಾಗಿದೆ:** ಸರ್ಕಾರದ ಆದೇಶ ಸಂ.ವಇ/42/ಹೆಚ್‌ಎಂ/ 1998. ದಿನಾಂಕ:10.4.2000

**ಪ್ರಸ್ತಾವನೆ:**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಉಲ್ಲೇಖಿತ ಆದೇಶದನ್ವಯ ವಿಧಾನಸಭಾ ಕ್ಷೇತ್ರವಾರು ಪುನರ್ ರಚಿಸಲು ತೀರ್ಮಾನಿಸಿದ್ದು, ತುಮಕೂರು ಜಿಲ್ಲೆ ಶಿರಾ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ:ವಇ/ 89/ಹೆಚ್‌ಎಎಸ್ 2006, ಬೆಂಗಳೂರು, ದಿನಾಂಕ: 27ನೇ ಜೂನ್ 2006**

ಮೇಲ್ಕಂಡ ಸಂದರ್ಭದಲ್ಲಿ ಹಾವೇರಿ ಜಿಲ್ಲೆ ಶಿರಾ ನಗರ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆಶ್ರಯ ಸಮಿತಿಯನ್ನು ಪುನರ್ ರಚಿಸಲಾಗಿದೆ.

| | | |
|---|---|---|
| 1. | ಶ್ರೀ ಹೆಚ್. ವಾಜೀದ್ ಅಹಮದ್, ಶಿರಾ, ತುಮಕೂರು ಜಿಲ್ಲೆ. | ಸದಸ್ಯರು |
| 2. | ಶ್ರೀ ಶ್ರೀಮತಿ ಮಂಜುಳ ಸಂತೇಪೇಟೆ, ಶಿರಾ, ತುಮಕೂರು ಜಿಲ್ಲೆ | ಸದಸ್ಯರು |
| 3. | ಶ್ರೀ ನರಸಿಂಹಯ್ಯ ಎಫ್. ಟಿ. ಓನರ್ ರಂಗನಾಥನಗರ ಶಿರಾ, ತುಮಕೂರು ಜಿಲ್ಲೆ. | ಸದಸ್ಯರು |
| 4. | ಶ್ರೀ ಭೋಜರಾಜು, ಬನ್ನಿನಗರ, ಶಿರಾ, ತುಮಕೂರು ಜಿಲ್ಲೆ. | ಸದಸ್ಯರು |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1053

**ಎಸ್. ಇಂದುಮತಿ**

ಪೀಠಾಧಿಕಾರಿ-2, ವಸತಿ ಇಲಾಖೆ.

**ವಿಷಯ:** ರಾಯಚೂರು ಜಿಲ್ಲೆ, ರಾಯಚೂರು ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ.

**ಓದಲಾಗಿದೆ:** ಸರ್ಕಾರದ ಆದೇಶ ಸಂ.ವಇ/42/ಹೆಚ್‌ಎಎಂ/ 1998, ದಿನಾಂಕ:10.4.2000

**ಪ್ರಸ್ತಾವನೆ:**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಉಲ್ಲೇಖಿತ ಆದೇಶದನ್ವಯ ವಿಧಾನಸಭಾ ಕ್ಷೇತ್ರವಾರು ಪುನರ್ ರಚಿಸಲು ತೀರ್ಮಾನಿಸಿದ್ದು, ರಾಯಚೂರು ಜಿಲ್ಲೆ ರಾಯಚೂರು ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ:ವಇ/ 86/ಹೆಚ್‌ಎಎಸ್ 2006, ಬೆಂಗಳೂರು, ದಿನಾಂಕ: 1ನೇ ಜುಲೈ 2006**

ಮೇಲ್ಕಂಡ ಸಂದರ್ಭದಲ್ಲಿ ರಾಯಚೂರು ಜಿಲ್ಲೆ ರಾಯಚೂರು ನಗರ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆಶ್ರಯ ಸಮಿತಿಯನ್ನು ಪುನರ್ ರಚಿಸಲಾಗಿದೆ.

| | | |
|---|---|---|
| 1. | ಶ್ರೀ ರಮೇಶ್‌ನಾಯ್ಕ ಜವಾಹರನಗರ, ರಾಘವೇಂದ್ರ ಸ್ವಾಮಿ ಮಠ, ರಾಯಚೂರು ಜಿಲ್ಲೆ. | ಸದಸ್ಯರು |
| 2. | ಶ್ರೀಮತಿ ಸುಲೋಚನಾ, ಗಂಡ ಪ್ರಭಾಕರ್ ಬಿ.ಡಬ್ಲ್ಯೂ.ಎನ್ ನಿಜಲಿಂಗಪ್ಪ ನಗರ, ರಾಯಚೂರು. | ಸದಸ್ಯರು |
| 3. | ಶ್ರೀ ಡಿ. ಜೇಮ್ಸ್, ತಂದೆ ಡೇವಿಡ್ ಮನೆ ನಂ.1-4-90/27, ರಾಮಕೃಷ್ಣ ನಗರ, ಜ್ಯೋತಿ ಕಾಲೋನಿ, ರಾಯಚೂರು. | ಸದಸ್ಯರು |
| 4. | ಶ್ರೀ ರಾಜಕುಮಾರ್, ತಂದೆ ಶರಣಪ್ಪ ಶಶಿಮಹಲ್ ಟಾಕೀಸ್ ರಸ್ತೆ, ಮಂಗಳವಾರಪೇಟೆ ರಾಯಚೂರು. | ಸದಸ್ಯರು |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ಇಂದುಮತಿ**

ಪಿ.ಆರ್. 1054

ಪೀಠಾಧಿಕಾರಿ-2, ವಸತಿ ಇಲಾಖೆ.

## ನಗರಾಭಿವೃದ್ಧಿ ಸಚಿವಾಲಯ

**ವಿಷಯ:** ಶ್ರೀ ಎಸ್. ಹನುಮಂತಪ್ಪ, ಕೆ.ಎಂ.ಎ.ಎಸ್., ಹಿಂದಿನ ಪೌರಾಯುಕ್ತರು, ನಗರಸಭೆ, ಕೋಲಾರ ಇವರನ್ನು ಅಮಾನತ್ತಿನಿಂದ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ನಅಇ 153 ಕೆಎಂಆರ್ 2004 ದಿನಾಂಕ:29.3.2005.
2. ಅಪರ ನಿಬಂದಕರು (ವಿಚಾರಣೆ-1), ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರ ವಿಚಾರಣಾ ವರದಿ ಸಂಖ್ಯೆ: LOK/ARE-1/ENQ-9/2002-03, ದಿನಾಂಕ:15.7.05.
3. ಮಾನ್ಯ ಉಪ ಲೋಕಾಯುಕ್ತರು, ಕರ್ನಾಟಕ, ಬೆಂಗಳೂರು ಇವರ ಪತ್ರ ಸಂಖ್ಯೆ: LOK/ARE-1/ENQ-9/2002-03 ದಿನಾಂಕ:22.7.05

**ಪ್ರಸ್ತಾವನೆ:**

ಶ್ರೀ ಎಸ್. ಹನುಮಂತಪ್ಪ, ಹಿಂದಿನ ಪೌರಾಯುಕ್ತರು, ಕೋಲಾರ ನಗರಸಭೆ, ಕೋಲಾರ ಹಾಗೂ ಮತ್ತಿತರರ ವಿರುದ್ಧ ಮಾಡಲಾದ ಆಪಾದನೆಗಳ ಬಗ್ಗೆ ಮಾನ್ಯ ಲೋಕಾಯುಕ್ತರು ಸಲ್ಲಿಸಿದ ತನಿಖಾ ವರದಿ ಮೇರೆಗೆ ಸದರಿಯವರನ್ನು ಬೇರೆ ಕಡೆಗೆ ವರ್ಗಾಯಿಸಲಾಗಿತ್ತು. ನಂತರ ಶ್ರೀ ಎಸ್. ಹನುಮಂತಪ್ಪ ಇವರನ್ನು ಮತ್ತೆ ಕೋಲಾರ ನಗರಸಭೆಗೆ ವರ್ಗಾವಣೆ ಮಾಡಿ ಆದೇಶಿಸಿರುವುದರ ವಿರುದ್ಧ ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ರಿಟ್ ಅರ್ಜಿ ಸಂಖ್ಯೆ:44930/04 ನ್ನು ದಾಖಲಿಸಿದ್ದು, ದಿನಾಂಕ:28.3.2005ರಂದು ಮಾನ್ಯ ಉಚ್ಚ ನ್ಯಾಯಾಲಯವು ನೀಡಿದ ತೀರ್ಪಿನನುಸಾರ ಶ್ರೀ ಎಸ್.ಹನುಮಂತಪ್ಪ ಇವರನ್ನು ಮೇಲೆ ಕ್ರಮಾಂಕ 1 ರಲ್ಲಿ ಓದಲಾದ ದಿನಾಂಕ:29.3.2005ರ ಆದೇಶಾನುಸಾರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 10 (1) ಜೊತೆಗೆ ಓದಲಾದ ನಿಯಮ 10 (3)ರನ್ವಯ ಅಮಾನತ್ತಿನಲ್ಲಿಡಲಾಗಿತ್ತು.

ಮೇಲೆ ಕ್ರಮಾಂಕ 2ರಲ್ಲಿ ಓದಲಾದ ದಿನಾಂಕ:15.7.2005ರಲ್ಲಿ ಅಪರ ನಿಬಂಧಕರು (ವಿಚಾರಣೆ-1), ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಈ ಪ್ರಕರಣ ಕುರಿತು ಇಲಾಖಾ ವಿಚಾರಣೆ ಕೈಗೊಂಡು ವಿಚಾರಣೆ ವರದಿಯನ್ನು ಸಲ್ಲಿಸಿರುತ್ತಾರೆ. ಅದರಂತೆ, ಮೇಲೆ ಕ್ರಮಾಂಕ 3ರಲ್ಲಿ ಓದಲಾದ ದಿನಾಂಕ:22.7.2005ರ ಪತ್ರದಲ್ಲಿ ಮಾನ್ಯ ಉಪ ಲೋಕಾಯುಕ್ತ, ಕರ್ನಾಟಕ ರಾಜ್ಯ ಬೆಂಗಳೂರು, ಇವರು ತಮ್ಮ ಶಿಫಾರಸ್ಸುಗಳನ್ನು ಮಾಡಿರುತ್ತಾರೆ. ಈ ಪ್ರಕರಣವನ್ನು ವಿಚಾರಣಾ ವರದಿ ಮತ್ತು ದಾಖಲೆಗಳ ಹಿನ್ನೆಲೆಯಲ್ಲಿ ನಿಯಮಗಳಾನುಸಾರ ಸಮಗ್ರವಾಗಿ ಪರಿಶೀಲಿಸಲಾಗಿ ಇಬ್ಬರು ನೌಕರರು ಈಗಾಗಲೇ ಸೇವೆಯಿಂದ ವಯೋನಿವೃತ್ತಿ ಹೊಂದಿದ್ದು, ಶ್ರೀ ಎಸ್. ಸಣ್ಣಪ್ಪ, ಹಿಂದಿನ ಪೌರಾಯುಕ್ತರು, ನಗರಸಭೆ, ಕೋಲಾರ ಇವರು ಈಗಾಗಲೇ ಮೃತರಾಗಿರುತ್ತಾರೆ. ಆದಕಾರಣ, ಈ ಪ್ರಕರಣವನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 214 ರನ್ವಯ ಅಗತ್ಯ ಕ್ರಮಗಳನ್ನು ಕೈಗೊಳ್ಳುವ ಬಗ್ಗೆ ಪರಿಶೀಲಿಸಲಾಗುತ್ತಿದೆ. ತನ್ಮಧ್ಯೆ, ಶ್ರೀ ಎಸ್.ಹನುಮಂತಪ್ಪ ಅವರನ್ನು ಒಂದು ವರ್ಷಕ್ಕೂ ಹೆಚ್ಚಿನ ಕಾಲ ಸೇವೆಯಿಂದ

ಅಮಾನತ್ತಿನಲ್ಲಿರಿಸಿರುವುದರಿಂದ ಯಾವುದೇ ಕೆಲಸ ಪಡೆಯದೇ ಜೀವನಾಂಶ ಭತ್ಯೆ ನೀಡಲಾಗುತ್ತಿರುವ ಕಾರಣದಿಂದ ಸದರಿಯವರನ್ನು ತಕ್ಷಣದಿಂದ ಅನ್ವಯಿಸುವಂತೆ ಅಮಾನತ್ತಿನಿಂದ ಬಿಡುಗಡೆ ಮಾಡಿ ಸೇವೆಯಲ್ಲಿ ಪುನಃ ಸ್ಥಾಪಿಸುವುದು ಸೂಕ್ತವೆಂದು ಪರಿಗಣಿಸಲಾಗಿದೆ. ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ:ನಅಇ 153 ಕೆಎಂಆರ್ 2004, ಬೆಂಗಳೂರು, ದಿನಾಂಖ: 5ನೇ ಜುಲೈ 2006**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳಿಂದಾಗಿ ಶ್ರೀ ಎಸ್. ಹನುಮಂತಪ್ಪ, ಹಿಂದಿನ ಪೌರಾಯುಕ್ತರು, ನಗರಸಭೆ, ಕೋಲಾರ ಇವರನ್ನು ತಕ್ಷಣದಿಂದ ಅನ್ವಯಿಸುವಂತೆ ಅಮಾನತ್ತಿನಿಂದ ಬಿಡುಗಡೆ ಮಾಡಿ ಶಿಸ್ತು ಕ್ರಮ/ ಕ್ರಿಮಿನಲ್ ಮೊಕದ್ದಮೆ ಬಾಕಿ ಇಟ್ಟು, ಸೇವೆಯಲ್ಲಿ ಪುನಃ ಸ್ಥಾಪಿಸಲಾಗಿದ್ದು, ಪೌರಾಯುಕ್ತರು, ನಗರಸಭೆ, ರಾಬರ್ಟ್‌ಸನ್‌ಪೇಟೆ (ಕೆಜಿಎಫ್), ಈ ಹುದ್ದೆಗೆ ನೇಮಕ ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಜಿ. ವಾಲಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ನಗರಾಭಿವೃದ್ಧಿ ಇಲಾಖೆ.

ಪಿ.ಆರ್. 1055

## ಕನ್ನಡ ಮತ್ತು ಸಂಸ್ಕೃತಿ ಸಚಿವಾಲಯ

**ವಿಷಯ:** ನಿರ್ದೇಶಕರು, ರಾಜ್ಯ ಪತ್ರಾಗಾರ ಇಲಾಖೆ ಅವರಿಗೆ ಉತ್ತರಾಂಚಲದ ಡೆಹರಾಡೂನ್‌ನಲ್ಲಿ ನಡೆಯುವ ರಾಷ್ಟ್ರೀಯ ಪತ್ರಪಾಲಕರ ಸಮಿತಿಯ 42ನೇ ಮಹಾಸಭೆಯಲ್ಲಿ ಭಾಗವಹಿಸಲು ಅನುಮತಿ ನೀಡುವ ಬಗ್ಗೆ

**ಓದಲಾಗಿದೆ:** ನಿರ್ದೇಶಕರು, ರಾಜ್ಯ ಪತ್ರಾಗಾರ ಇಲಾಖೆ ಅವರ ಪತ್ರ ಸಂಖ್ಯೆ: ಎಆರ್‌ಎಸ್ 18 ಎನ್‌ಎಐ 2006 ದಿನಾಂಕ 1.6.2006

**ಪ್ರಸ್ತಾವನೆ:**

ನಿರ್ದೇಶಕರು, ರಾಜ್ಯ ಪತ್ರಾಗಾರ ಇಲಾಖೆ ಅವರು ಮೇಲೆ ಓದಲಾದ ದಿನಾಂಕ:1.6.2006ರ ಪತ್ರದಲ್ಲಿ ರಾಷ್ಟ್ರೀಯ ಪತ್ರಪಾಲಕರ ಸಮಿತಿಯ 42ನೇ ಮಹಾಸಭೆಯು ಉತ್ತರಾಂಚಲದ ಡೆಹರಾಡೂನ್‌ನಲ್ಲಿ 19 ಮತ್ತು 20ನೇ ಜೂನ್ 2006ರಂದು ನಡೆಯಲಿದ್ದು ಸದರಿ ಸಭೆಗೆ ಹಾಜರಾಗಲು ಅನುಮತಿ ಕೋರಿದ್ದಾರೆ. ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ:ಸಂಕಇ 16 ರಾಪಸ 2006, ಬೆಂಗಳೂರು, ದಿನಾಂಕ: 4ನೇ ಜುಲೈ 2006**

ರಾಷ್ಟ್ರೀಯ ಪತ್ರಾಗಾರ, ನವದೆಹಲಿ ಇದರ ಆಶ್ರಯದಲ್ಲಿ ಉತ್ತರಾಂಚಲದ ಡೆಹರಾಡೂನ್‌ನಲ್ಲಿ 19 ಮತ್ತು 20ನೇ ಜೂನ್ 2006ರಂದು ನಡೆಯುವ ರಾಷ್ಟ್ರೀಯ ಪತ್ರಪಾಲಕರ ಸಮಿತಿಯ 42ನೇ ಮಹಾಸಭೆಯಲ್ಲಿ ಭಾಗವಹಿಸಲು ನಿರ್ದೇಶಕರು. ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆ, ಬೆಂಗಳೂರು ಅವರಿಗೆ ಈ ಮೂಲಕ ಸರ್ಕಾರದ ಅನುಮತಿ ನೀಡಲಾಗಿದೆ.

ಸಭೆಯಿಂದ ಹಿಂದಿರುಗಿದ ನಂತರ ಸಭೆಯ ವಿವರ ಕುರಿತು ನಿರ್ದೇಶಕರು ಒಂದು ವರದಿಯನ್ನು ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ಶಿವರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ ಇಲಾಖೆ. (ಆಡಳಿತ ಕನ್ನಡ)

ಪಿ.ಆರ್. 1056

## URBAN DEVELOPMENT SECRETARIAT

**Sub:** Constitution of Apex Committee for supervision of the Relocating of the utility service lines of Bangalore Metro Rail

**Read:**
1. G.O. No.UDD 81 BMR 2006 Dated:26.5.2006
2. D.O. Letter No. BMRCL/MD/UDD/2006/30 DT.9.6.2006 received from M.D.Bangalore Metro Rail Corporation Ltd.,
3. D.O. letter No. BMRCL/Utl Shift/E-17/2006/208 Dt;13.6.2006.

**PREAMBLE:**

Government has constituted an **"Apex Committee"** under the Chairmanship of Chief Secretary and an **"Executive Committee"** under the Chairmanship of the Managing Director, Bangalore Metro Rail Corporation Ltd., to monitor the implementation of shifting of utilities of the Bangalore Metro Rail Corporation Ltd., vide Government Order cited at Sl. No.(1) above. General manager, BSNL is one of the members of the Apex Committee and Managing Director,BSNL, Bangalore is one of the members of the Executive Committee.

In the letter dated. 9.6.2006 and 13.6.2006 Managing Director, Bangalore Metro Rail Corporation Ltd., has proposed that a representative from Government of India may also be made a member of the Apex Committee.

In the letter dated ;13.6.2006, Managing Director, Bangalore Metro Rail Corporation Ltd., has stated that, the **"General manager, BSNL, Bangalore"** is nominated for the Apex Committee and the **"Managing Director, BSNL"**. for the Executive committee which needs to be amended as the **"Principal General Manager, BSNL Bangalore "** for the Apex Committee and the **"Chief General Manger, BSNL**, **Bangalore",** for the Excutive Committee, respectively.

Government has considered the above proposals of the Managing Director, BMRCL. Further, Government has also noted that the Government of India in its approval has ordered creation of a similar committee entitled **"High Power Committee",** Hence the following orders.

**Government Order No. UDD 81 BMR 2006 Bangalore Dated; 4th July 2006**

In partial modification of Government Order No. UDD 81 BMR 2006 Dated ;26.5.2006, Government is pleased to redesignate the **"Apex Committee"** as indicated in the said order as "High power committee" and also order that the words **"General Manager, BSNL, Bangalore"** at Sl. No.9. in the first para and "Managing Director, BSNL, Bangalore" at Sl. No. 6 of the third para of the said order to be read as **"Principal General Manager, BGTD, BSNL,Bangalore"** and **"General Manger (Development), BGTD, Bangalore"** respectively.

Futher,Government is also pleased to nominated Officer on Special Duty (MRTS), Ministry of Urban Development ,Government of India as a member to the **High Power Committee**.

By Order and in the name of the Governor of Karnataka,

**H. VISHWANATHA**

Under Secretary to Government,

Urban Development Department.

P.R. 1057

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ವಿಷಯ:** ಮುಖ್ಯಮಂತ್ರಿಯವರ ಸಚಿವಾಲಯದಲ್ಲಿ ಒಂದು ಗ್ರೂಪ್ 'ಎ' ಹುದ್ದೆಯೊಂದನ್ನು ಸೃಜಿಸುವ ಬಗ್ಗೆ.

**ಓದಲಾಗಿದೆ:** ಟಿಪ್ಪಣಿ ಸಂಖ್ಯೆ:ಸಿಎಂ 93 ಜೆಇಎನ್ 06, ದಿನಾಂಕ:24.3.2006.

**ಪ್ರಸ್ತಾವನೆ:**

ಮೇಲೆ ಓದಲಾಗಿರುವ ಟಿಪ್ಪಣಿಯಲ್ಲಿ ಮಾನ್ಯ ಮುಖ್ಯಮಂತ್ರಿಯವರ ಸಚಿವಾಲಯದ ಪರಿಹಾರ ನಿಧಿ ಶಾಖೆಯಲ್ಲಿ ಶ್ರೀ ಕೆ. ಮಾಧವರಾವ್, ಸಹಾಯಕ ನಿಯಂತ್ರಕರು (ಸ್ವತಂತ್ರ ಪ್ರಭಾರ) ರಾಜ್ಯ ಲೆಕ್ಕ ಪತ್ರ ಇಲಾಖೆ ಇವರನ್ನು ನೇಮಿಸಿ ಆದೇಶ ಹೊರಡಿಸಬೇಕೆಂದು ಪ್ರಸ್ತಾವನೆ ಇದೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 126 ಸಅಸೇ 2006, ಬೆಂಗಳೂರು, ದಿನಾಂಕ:12ನೇ ಜುಲೈ 2006**

ಮಾನ್ಯ ಮುಖ್ಯಮಂತ್ರಿಯವರ ಸಚಿವಾಲಯದಲ್ಲಿ ಒಂದು ಗ್ರೂಫ್ 'ಎ' ಹುದ್ದೆಯನ್ನು (ವೇತನ ಶ್ರೇಣಿ ರೂ. 7400-13120) ಶ್ರಿ ಕೆ. ಮಾಧವರಾವ್, ಸಹಾಯಕ ನಿಯಂತ್ರಕರು (ಸ್ವತಂತ್ರ ಪ್ರಭಾರ) ರಾಜ್ಯ ಲೆಕ್ಕಪತ್ರ ಇಲಾಖೆ ಅವರು ಕಾರ್ಯಭಾರ ವಹಿಸಿಕೊಂಡ ದಿನಾಂಕ:24.3.2006ರಿಂದ ಜಾರಿಗೆ ಬರುವಂತೆ ಮುಖ್ಯಮಂತ್ರಿಯವರ ಪದಾವಧಿಯವವರೆಗೆ ಅಥವಾ ಮುಂದಿನ ಆದೇಶದವರೆಗೆ ಇದರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಸೃಜಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಕ್ಯೆ:ಆಇ 1009/ವೆಚ್ಚ-5/2006, ದಿನಾಂಕ:1.7.2006ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಪಿ. ಪ್ರಭು**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ. (ಸೇವೆಗಳು-2)

ಪಿ.ಆರ್. 1058

**FOREST ECOLOGY AND ENVIRONMENT SECRETARIAT**

**Sub:** Transfer of M.L.No. 1676/2482 of M/s V.N.K. Menon over an extent of 22.45 ha of Manganese Ore, Jigenahalli Village, Sandur Taluk, Bellary District in favour of M/s Marwa Mining Company, Kudligi.

**Read:**
1. Letter No. A5 (1) MNGCR 1/00-01 dt:25.3.2006, of the Principal Chief Conservator of Forests Bangalore.
2. State Givernment letter No. FEE 62 FFM 2004, dt:5.4.2006.
3. Government of India, lr. No.F. No. 15-7/2006-ROHQ, Dt: 22.6.2006.

**PREAMBLE:**

The Principal Chief Conservator of Forests, Bangalore vide his letter dated 25.3.2006 read at (1) above has requested to obtain permission from the Government of India, Ministry of Envionment and Forests, for transfer of M.L.No. 1676/ 2482 of M/s V.N.K. Menon, over an extent of 22.45 ha. of Manganese Ore, jigenahalli Village, Sandur Taluk, Bellary District in favour of M/s Marwa Mining Company,Kudligi.

The proposal of Principal Chief Conservator of Forests, Bangalore was recommended to Government of Government of India, Ministry of Environment and Forests, New Delhi vide letter of even number dt:5.4.2006 read at (2) above and its approval was sought under Forest (Conservation) Act, 1980 for transferring the lease in the name of M/s Marwa Mining Company. M/s Marwa Mining Company also gave a letter of under taking that they will abide by all the terms and conditions of the agreement executed to the original user agency and NOC for such transfer was also furnished by the original user agency.

Government of India, Ministry of Environment and Forests, New Delhi vide their letter dated 22.6.2006 read at (3) above has conveyed the permission for transfer of M.L.No. 1676/2482 of M/s V.N.K.

Menon, over an extent of 22.45 ha. of Manganese Ore, Jigenahalli Village, Sandur Taluk, Bellary District in favour of M/s Marwa Mining Company, Kudligi.

The proposal has been examined in detail and hence the order.

**Government Order No. FEE 62 FFM 2004, Bangalore, Date: 6th July 2006**

After examining all aspect of the matter and in view of the approval accorded to the proposal by the Government of India, Ministry of Environment and Forests, New Delhi, Government hereby accord permission under Forest (Conservation) Act, 1980 for transfer of M.L. No. 1676/2482 of M/s V.N.K. Menon, over an extent of 22.45 ha. of Manganese Ore, Jigenahalli Village, Sandur Taluk, Bellary District in favour of M/s Marwa Mining Company, Kudligi subject to the condition that M/s Marwa Mining Company shall enter in to an agreement with the Deputy Conservator of Forests, Bellary Division and abide by all the conditions on which the forest land was leased to the original user agency and other condition which may be stipulated by the Central Government /State Government from time to time as per guidelines issued in para 2.8 of Forest (Conservation) Act, 1980.

By Order and in the name of the Governor of Karnataka,

**S.R. VATSALA**

P.R. 1059

Under Secretary to Government,

Forest Ecology and Environment Department.

**ಜಲ ಸಂಪನ್ಮೂಲ ಸಚಿವಾಲಯ**

**ವಿಷಯ:** ಹೇಮಾವತಿ ಯೋಜನೆಗೆ ಸಂಬಂಧಿಸಿದ ನೀರಾವರಿ ಸಲಹಾ ಸಮಿತಿ ಪುನರ್ ರಚನೆಯ ಬಗ್ಗೆ.

**ಓದಲಾಗಿದೆ:** ಸರ್ಕಾರದ ಆದೇಶ ಸಂಖ್ಯೆ:ಜಸಂಇ 102 ಎನ್‌ಹೆಚ್‌ಪಿ 2004, ದಿನಾಂಕ:24.6.2004.

**ಪ್ರಸ್ತಾವನೆ:**

ಮೇಲೆ ಓದಲಾದ ಸರ್ಕಾರಿ ಆದೇಶದಲ್ಲಿ ಹೇಮಾವತಿ ಜಲಾಶಯದ ನೀರಿನ ನಿರ್ವಹಣೆಗಾಗಿ ಅಧಿಕಾರಿ ಸದಸ್ಯರು, ಅಧಿಕಾರೇತರ ಸದಸ್ಯರು, ವಿಶೇಷ ಆಹ್ವಾನಿತ ಅಧಿಕಾರಿ ಸದಸ್ಯರು ಮತ್ತು ವಿಶೇಷ ಆಹ್ವಾನಿತ ಅಧಿಕಾರೇತರರನ್ನೊಳಗೊಂಡ ನೀರಾವರಿ ಸಲಹಾ ಸಮಿತಿಯನ್ನು ಮುಂದಿನ ಆದೇಶ ಹೊರಡಿಸುವವರೆಗೂ ಪರಿಷ್ಕರಿಸಿ ಪುನರ್ ರಚಿಸಲಾಗಿತ್ತು. ರಾಜ್ಯದಲ್ಲಿ ಹೊಸ ಸರ್ಕಾರವು ಅಸ್ತಿತ್ವಕ್ಕೆ ಬಂದಿರುವ ಹಿನ್ನೆಲೆಯಲ್ಲಿ ಸದರಿ ನೀರಾವರಿ ಸಲಹಾ ಸಮಿತಿಯನ್ನು ಪುನರ್ ರಚಿಸಲು ಸರ್ಕಾರವು ತೀರ್ಮಾನಿಸಿರುತ್ತದೆ. ಅದರಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಜಸಂಇ 60 ಎನ್‌ಹೆಚ್‌ಪಿ 2006, ಬೆಂಗಳೂರು, ದಿನಾಂಕ: 6ನೇ ಜುಲೈ 2006**

ಹೇಮಾವತಿ ಜಲಾಶಯದ ನೀರಿನ ನಿರ್ವಹಣೆಗಾಗಿ ಈ ಕೆಳಕಂಡ ಅಧಿಕಾರಿ ಸದಸ್ಯರು, ಅಧಿಕಾರೇತರ ಸದಸ್ಯರು, ವಿಶೇಷ ಆಹ್ವಾನಿತ ಅಧಿಕಾರಿ ಸದಸ್ಯರು, ವಿಶೇಷ ಆಹ್ವಾನಿತ ಅಧಿಕಾರೇತರ ಸದಸ್ಯರು ಮತ್ತು ಜನಪ್ರತಿನಿಧಿಗಳನ್ನೊಳಗೊಂಡ ನೀರಾವರಿ ಸಲಹಾ ಸಮಿತಿಯನ್ನು ಪರಿಷ್ಕರಿಸಿ ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶ ಹೊರಡಿಸುವವರೆಗೂ ಪುನರ್ ರಚಿಸಲಾಗಿದೆ.

ಶ್ರೀ ಹೆಚ್. ಡಿ. ರೇವಣ್ಣ, ಮಾನ್ಯ ಲೋಕೋಪಯೋಗಿ ಮತ್ತು ಇಂಧನ ಸಚಿವರು - ಅಧ್ಯಕ್ಷರು
ಕರ್ನಾಟಕ ಸರ್ಕಾರ, ಬೆಂಗಳೂರು.

**ಅಧಿಕಾರಿ ಸದಸ್ಯರು:**

1. ಆಡಳಿತಾಧಿಕಾರಿಗಳು, ಕಾವೇರಿ ಜಲಾನಯನ ಅಚ್ಚುಕಟ್ಟು ಅಭಿವೃದ್ಧಿ ಪ್ರಾಧಿಕಾರ, ಮೈಸೂರು.
2. ಮುಖ್ಯ ಇಂಜಿನಿಯರ್, ಹೇಮಾವತಿ ಯೋಜನೆ, ಗೊರೂರು.
3. ಮುಖ್ಯ ಇಂಜಿನಿಯರ್, ಹೇಮಾವತಿ ನಾಲಾ ವಲಯ, ತುಮಕೂರು.
4. ಜಿಲ್ಲಾಧಿಕಾರಿಗಳು, ಹಾಸನ ಜಿಲ್ಲೆ ,ಹಾಸನ.
5. ಜಿಲ್ಲಾಧಿಕಾರಿಗಳು, ಮಂಡ್ಯ ಜಿಲ್ಲೆ, ಮಂಡ್ಯ.
6. ಜಿಲ್ಲಾಧಿಕಾರಿಗಳು, ತುಮಕೂರು ಜಿಲ್ಲೆ, ತುಮಕೂರು.
7. ಅಧೀಕ್ಷಕ ಇಂಜಿನಿಯರ್, ಹೇಮಾವತಿ ಯೋಜನಾ ವೃತ್ತ, ಗೊರೂರು - ಸದಸ್ಯ ಕಾರ್ಯದರ್ಶಿ

**ಅಧಿಕಾರೇತರ ಸದಸ್ಯರು:**

1. ಶ್ರೀ ಎನ್. ಚಲುವರಾಯಸ್ವಾಮಿ, ಮಾನ್ಯ ಸಾರಿಗೆ ಸಚಿವರು, ಕರ್ನಾಟಕ ಸರ್ಕಾರ, ಬೆಂಗಳೂರು.
2. ಅಧ್ಯಕ್ಷರು, ಕಾವೇರಿ ಜಲಾನಯನ ಅಚ್ಚುಕಟ್ಟು ಅಭಿವೃದ್ಧಿ ಪ್ರಾಧಿಕಾರ, ಮೈಸೂರು.
3. ಶ್ರೀ ಎಸ್.ಆರ್. ಶ್ರೀನಿವಾಸ್, ವಿಧಾನ ಸಭಾ ಸದಸ್ಯರು, ಗುಬ್ಬಿ ಕ್ಷೇತ್ರ.
4. ಶ್ರೀ ಹೆಚ್. ನಿಂಗಪ್ಪ, ವಿಧಾನ ಸಭಾ ಸದಸ್ಯರು, ಕುಣಿಗಲ್ ಕ್ಷೇತ್ರ.
5. ಶ್ರೀ ಎ.ಟಿ. ರಾಮಸ್ವಾಮಿ, ವಿಧಾನ ಸಭಾ ಸದಸ್ಯರು, ಅರಕಲಗೂಡು ಕ್ಷೇತ್ರ.
6. ಶ್ರೀ ಹೆಚ್.ಎಸ್. ಪ್ರಕಾಶ್, ವಿಧಾನ ಸಭಾ ಸದಸ್ಯರು, ಹಾಸನ ಕ್ಷೇತ್ರ.
7. ಶ್ರೀ ಸಿ.ಎನ್. ಪುಟ್ಟೇಗೌಡ, ವಿಧಾನ ಸಭಾ ಸದಸ್ಯರು, ಶ್ರವಣಬೆಳಗೊಳ ಕ್ಷೇತ್ರ.
8. ಶ್ರೀ ಎಸ್. ಶಿವಣ್ಣ, ವಿಧಾನ ಸಭಾ ಸದಸ್ಯರು, ತುಮಕೂರು ಕ್ಷೇತ್ರ.

**ವಿಶೇಷ ಆಹ್ವಾನಿತ ಅಧಿಕಾರೇತರ:**

1. ಶ್ರೀ ಹೆಚ್.ಡಿ. ದೇವೇಗೌಡ, ಮಾನ್ಯ ಲೋಕಸಭಾ ಸದಸ್ಯರು, ಹಾಸನ ಕ್ಷೇತ್ರ.
2. ಶ್ರೀ ಎಸ್. ಮಲ್ಲಿಕಾರ್ಜುನಯ್ಯ, ಮಾನ್ಯ ಲೋಕಸಭೆ ಸದಸ್ಯರು, ತುಮಕೂರು ಕ್ಷೇತ್ರ.
3. ಶ್ರೀ ಅಂಬರೀಶ್, ಮಾನ್ಯ ಲೋಕಸಭಾ ಸದಸ್ಯರು, ಮಂಡ್ಯ ಕ್ಷೇತ್ರ.

4. ಶ್ರೀ ಸಿ. ಚನ್ನಿಗಪ್ಪ, ಮಾನ್ಯ ಅರಣ್ಯ ಸಚಿವರು, ಕರ್ನಾಟಕ ಸರ್ಕಾರ , ಬೆಂಗಳೂರು.
5. ಶ್ರೀ ಹೆಚ್.ಬಿ. ರಾಮು. ವಿಧಾನ ಸಭಾ ಸದಸ್ಯರು, ಕೆರೆಗೋಡು ಕ್ಷೇತ್ರ.
6. ಶ್ರೀ ಕೆ.ಎಸ್. ಕಿರಣ್ ಕುಮಾರ್, ವಿಧಾನ ಸಭಾ ಸದಸ್ಯರು, ಕಳ್ಳಂಬೆಳ್ಳ ಕ್ಷೇತ್ರ.
7. ಶ್ರೀ ಜೆ.ಸಿ. ಮಾಧುಸ್ವಾಮಿ, ವಿಧಾನ ಸಭಾ ಸದಸ್ಯರು, ಚಿಕ್ಕನಾಯಕನಹಳ್ಳಿ ಕ್ಷೇತ್ರ.
8. ಶ್ರೀ ಬಿ. ನಂಜಾಮರಿ,ವಿಧಾನ ಸಭಾ ಸದಸ್ಯರು, ತಿಪಟೂರು ಕ್ಷೇತ್ರ.
9. ಶ್ರೀ ಸಿ.ಎಸ್. ಪುಟ್ಟರಾಜು, ವಿಧಾನ ಸಭಾ ಸದಸ್ಯರು, ಪಾಂಡವಪುರ ಕ್ಷೇತ್ರ.
10.ಶ್ರೀ ಎಂ.ಟಿ. ಕೃಷ್ಣಪ್ಪ, ವಿಧಾನಸಭಾ ಸದಸ್ಯರು, ತುರುವೇಕೆರೆ ಕ್ಷೇತ್ರ.
11.ಶ್ರೀ ಡಿ. ನಾಗರಾಜಯ್ಯ, ವಿಧಾನ ಸಭಾ ಸದಸ್ಯರು, ಹುಲಿಯೂರುದುರ್ಗ ಕ್ಷೇತ್ರ.
12.ಶ್ರೀ ಕೆ.ಎನ್. ರಾಜಣ್ಣ, ವಿಧಾನ ಸಭಾ ಸದಸ್ಯರು, ಬೆಳ್ಳಾವಿ ಕ್ಷೇತ್ರ.
13. ಶ್ರೀ ಎಸ್.ಎಂ. ಆನಂದ್, ವಿಧಾನ ಪರಿಷತ್ ಸದಸ್ಯರು, ಹಾಸನ.
14. ಶ್ರೀ ಉಗ್ರಪ್ಪ, ವಿಧಾನ ಪರಿಷತ್ ಸದಸ್ಯರು, ತುಮಕೂರು ಕ್ಷೇತ್ರ.

**ವಿಶೇಷ ಆಹ್ವಾನಿತ ಅಧಿಕಾರಿ ಸದಸ್ಯರು:**

1. ಸರ್ಕಾರದ ಕಾರ್ಯದರ್ಶಿಗಳು, ಜಲಸಂಪನ್ಮೂಲ ಇಲಾಖೆ, ಬೆಂಗಳೂರು.
2. ಸರ್ಕಾರದ ಕಾರ್ಯದರ್ಶಿಗಳು, ಕಾನೂನು ಇಲಾಖೆ, ಬೆಂಗಳೂರು.
3. ವ್ಯವಸ್ಥಾಪಕ ನಿರ್ದೇಶಕರು, ಕಾವೇರಿ ನೀರಾವರಿ ನಿಗಮ ನಿಯಮಿತ, ಮೈಸೂರು.
4. ಜಿಲ್ಲಾ ಪೊಲೀಸ್ ವರಿಷ್ಠಾಧಿಕಾರಿಗಳು, ಹಾಸನ ಜಿಲ್ಲೆ, ಹಾಸನ.
5. ಜಿಲ್ಲಾ ಪೊಲೀಸ್ ವರಿಷ್ಠಾಧಿಕಾರಿಗಳು ಮಂಡ್ಯ ಜಿಲ್ಲೆ, ಮಂಡ್ಯ.
6. ಜಿಲ್ಲಾ ಪೊಲೀಸ್ ವರಿಷ್ಠಾಧಿಕಾರಿಗಳು, ತುಮಕೂರು ಜಿಲ್ಲೆ, ತುಮಕೂರು.
7. ಜಂಟಿ ನಿರ್ದೇಶಕರು, ಕೃಷಿ ಇಲಾಖೆ, ಹಾಸನ.
8. ಜಂಟಿ ನಿರ್ದೇಶಕರು, ಕೃಷಿ ಇಲಾಖೆ, ತುಮಕೂರು.
9. ಜಂಟಿ ನಿರ್ದೇಶಕರು, ಕೃಷಿ ಇಲಾಖೆ, ಮಂಡ್ಯ.
10. ಜಂಟಿ ನಿರ್ದೇಶಕರು, ವಿ.ಸಿ. ಫಾರಂ, ಮಂಡ್ಯ.

**ಜನಪ್ರತಿನಿಧಿಗಳು:**

1. ಶ್ರೀ ಕೃಷ್ಣ, ಗೌರವಾನ್ವಿತ ಸಭಾಧ್ಯಕ್ಷರು, ಕರ್ನಾಟಕ ವಿಧಾನ ಸಭೆ, ಬೆಂಗಳೂರು.
2. ಶ್ರೀ ಎನ್. ವೈ. ಹನುಮಂತಪ್ಪ, ಮಾನ್ಯ ಲೋಕಸಭಾ ಸದಸ್ಯರು, ಚಿತ್ರದುರ್ಗ ಕ್ಷೇತ್ರ.
3. ಶ್ರೀ ಆರ್.ಎಲ್. ಜಾಲಪ್ಪ, ಮಾನ್ಯ ಲೋಕಸಭಾ ಸದಸ್ಯರು, ಚಿಕ್ಕಬಳ್ಳಾಪುರ ಕ್ಷೇತ್ರ.
4. ಶ್ರೀ ಬಿ. ಸತ್ಯನಾರಾಯಣ, ವಿಧಾನ ಸಭಾ ಸದಸ್ಯರು, ಶಿರಾ ಕ್ಷೇತ್ರ.
5. ಡಾ: ಜಿ.ಪರಮೇಶ್ವರ್, ವಿಧಾನ ಪರಿಷತ್ ಸದಸ್ಯರು, ಪದವೀಧರ ಕ್ಷೇತ್ರ.
6. ಶ್ರೀ ಹೆಚ್. ಶಿವಶಂಕರ್, ವಿಧಾನ ಪರಿಷತ್ ಸದಸ್ಯರು, ಮಧುಗಿರಿ ಕ್ಷೇತ್ರ.
7. ಶ್ರೀ ಬಿ.ಆರ್. ಗುರುದೇವ್, ವಿಧಾನ ಪರಿಷತ್ ಸದಸ್ಯರು.
8. ಶ್ರೀ ಕೆ.ಟಿ. ಶ್ರೀಕಂಠೇಗೌಡ, ವಿಧಾನ ಪರಿಷತ್ ಸದಸ್ಯರು.
9. ಶ್ರೀ ಮರಿತಿಬ್ಬೇಗೌಡ, ವಿಧಾನ ಪರಿಷತ್ ಸದಸ್ಯರು.
10.ಶ್ರೀ ವೈ.ಎ. ನಾರಾಯಣಸ್ವಾಮಿ, ವಿಧಾನ ಪರಿಷತ್ ಸದಸ್ಯರು.

2. ಸದರಿ ಅಧಿಕಾರೇತರ ಸದಸ್ಯರುಗಳ ಪ್ರವಾಸ ಭತ್ಯೆ ಮತ್ತು ಇತರೆ ಭತ್ಯೆಗಳನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 2 ಎಸ್‌ಆರ್‌ಎ 2000, ದಿನಾಂಕ:3.2.2001, ರನ್ವಯ ನೀಡತಕ್ಕದ್ದು ಹಾಗೂ ಇದಕ್ಕೆ ತಗಲುವ ವೆಚ್ಚವನ್ನು ಕಾವೇರಿ ನೀರಾವರಿ ನಿಗಮ ನಿಯಮಿತದಡಿ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಎಸ್. ರಂಗರಾಜು**

ಪಿ.ಆರ್. 1060

ವಿಶೇಷ ಕರ್ತವ್ಯಾಧಿಕಾರಿ, (ತಾಂತ್ರಿಕ, ಎಂಎಂಐ-3)
ಜಲ ಸಂಪನ್ಮೂಲ ಇಲಾಖೆ.

## ಒಳಾಡಳಿತ ಸಚಿವಾಲಯ

**ವಿಷಯ:** ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ ನೇಮಕಗೊಂಡ ಸಹಾಯಕ ಸರ್ಕಾರಿ ಅಭಿಯೋಜಕರು-ವ ಸಹಾಯಕ ಸರ್ಕಾರಿ ವಕೀಲರ (ಸಮೂಹ-ಬಿ)ಜನ್ಮ ದಿನಾಂಕವನ್ನು ಒಪ್ಪಿಕೊಳ್ಳುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಅಧಿಸೂಚನೆ ನಮ.ಲಾ 225 ಪಿಪಿಇ 1991, ದಿನಾಂಕ 14.6.1994.
2. ಸರ್ಕಾರದ ಅಧಿಸೂಚನೆ ಸಂ.ಲಾ 97 ಪಿಪಿಇ 1997, ದಿನಾಂಕ:29.1.1998.
3. ಮಹಾಲೇಖಪಾಲರ ಪತ್ರ ನಂ XIII/ಜೆ4/2000-01/ 792-93, ದಿನಾಂಕ:13.12.2000.

**ಸರ್ಕಾರದ ಆದೇಶ ಸಂಖ್ಯೆ: ಒಇ 573 ಪಿಪಿಇ 2005, ದಿನಾಂಕ:12ನೇ ಜುಲೈ 2006**

ಮೇಲೆ ಓದಲಾದ (1) ಮತ್ತು (2)ರ ಸರ್ಕಾರದ ಅಧಿಸೂಚನೆಯಲ್ಲಿ ನೇಮಕಗೊಂಡ ಈ ಕೆಳಕಂಡ ಸಹಾಯಕ ಸರ್ಕಾರಿ ಅಭಿಯೋಜಕರು -ವ-ಸಹಾಯಕ ಸರ್ಕಾರಿ ವಕೀಲರ (ಸಮೂಹ-ಬಿ) ಜನ್ಮ ದಿನಾಂಕವನ್ನು ಅವರವರ ಹೆಸರುಗಳ ಮುಂದೆ ತೋರಿಸಿರುವಂತೆ ಕರ್ನಾಟಕ ರಾಜ್ಯ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿಯವರು ನೀಡಿರುವ ಅಂಕಪಟ್ಟಿ/ ಪ್ರೌಢಶಾಲೆಯ ವರ್ಗಾವಣೆ ಪ್ರಮಾಣ ಪತ್ರ (TC) / ಶಪಥ ಪತ್ರಗಳನ್ನು ಪರಿಶೀಲಿಸಿದ ನಂತರ ಕರ್ನಾಟಕ ಸರ್ಕಾರಿ ನೌಕರರ (ವಯೋನಿರ್ಧಾರ) ಶಾಸನ 1974ರ ಕಲಂ-3ರ ಉಪಕಲಂ-2ರ ಅನ್ವಯ ಸರ್ಕಾರವು ಒಪ್ಪಿರುತ್ತದೆ.

| ಕ್ರ. ಸಂ. | ಅಧಿಕಾರಿಗಳ ಹೆಸರು, ಹುದ್ದೆ, ನೇಮಕಗೊಂಡ ಸ್ಥಳ<br>ಶ್ರೀ:ಶ್ರೀಮತಿ | ಸರ್ಕಾರವು ಒಪ್ಪಿರುವ ಜನ್ಮ ದಿನಾಂಕ |
|---|---|---|
| 1. | ಸಿ.ಎಂ. ಬೆಳಲದವರ್, ಸಹಾಯಕ ಸರ್ಕಾರಿ ಅಭಿಯೋಜಕರು-ವ-ಸಹಾಯಕ ಸರ್ಕಾರಿ ವಕೀಲರು, ಎಂ ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಹೊನ್ನಾವರ. | 16.4.59 (ಹದಿನಾರು ನಾಲ್ಕು ಐವತ್ತೊಂಬತ್ತು) |
| 2. | ಜಿ.ಎಲ್. ಪವಾರ್, ಸಹಾಯಕ ಸರ್ಕಾರಿ ಅಭಿಯೋಜಕರು-ವ-ಸಹಾಯಕ ಸರ್ಕಾರಿ ವಕೀಲರು, ಎಂ ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಚಿಂಚೋಳಿ. | 7.12.59 (ಏಳೂ ಹನ್ನೆರಡು ಐವತ್ತೊಂಬತ್ತು) |
| 3. | ಎಸ್.ಎ. ಪಾಸ್ತೆ, ಸಹಾಯಕ ಸರ್ಕಾರಿ ಅಭಿಯೋಜಕರು-ವ-ಸಹಾಯಕ ಸರ್ಕಾರಿ ವಕೀಲರು, 2 ನೇ ಜೆಎಂಎಫ್‌ಸಿ ನ್ಯಾಯಾಲಯ, ಬೀದರ್. | 6.6.61 (ಆರು ಆರು ಅರವತ್ತೊಂದು) |
| 4. | ಪಿ.ಇಕ್ಬಾಲ ಅಹ್ಮದ್, ಸಹಾಯಕ ಸರ್ಕಾರಿ ಅಭಿಯೋಜಕರು-ವ-ಸಹಾಯಕ ಸರ್ಕಾರಿ ವಕೀಲರು, ಜೆಎಂಎಫ್‌ಸಿ ನ್ಯಾಯಾಲಯ, ಚಿತ್ತಾಪುರ. | 1.6.60 (ಒಂದು ಆರು ಅರವತ್ತು) |
| 5. | ಸಿದ್ದಪ್ಪ ರುದ್ರಪ್ಪ ಸೂಡಿ (ಎಸ್. ಆರ್. ಸೂಡಿ), ಸಹಾಯಕ ಸರ್ಕಾರಿ ಅಭಿಯೋಜಕರು-ವ-ಸಹಾಯಕ ಸರ್ಕಾರಿ ವಕೀಲರು, ಎಂ ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ನಿಪ್ಪಾಣಿ. | 8.7.56 (ಎಂಟು ಏಳು ಐವತ್ತಾರು) |
| 6. | ಕೆ.ಜಿ. ಪುರಾಣಿಕ ಮಠ, ಸಹಾಯಕ ಸರ್ಕಾರಿ ಅಭಿಯೋಜಕರು-ವ-ಸಹಾಯಕ ಸರ್ಕಾರಿ ವಕೀಲರು, ಎಂ ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ದೇವದುರ್ಗ. | 1.6.55 (ಒಂದು ಆರು ಐವತ್ತೈದು) |
| 7. | ಎಂ.ಎಂ. ಸತ್ತಿಗೇರಿ, ಸಹಾಯಕ ಸರ್ಕಾರಿ ಅಭಿಯೋಜಕರು-ವ-ಸಹಾಯಕ ಸರ್ಕಾರಿ ವಕೀಲರು, 2ನೇ ಜೆಎಂಎಫ್‌ಸಿ ನ್ಯಾಯಾಲಯ, ರಾಯಚೂರು. | 10.12.59 (ಹತ್ತು ಹನ್ನೆರಡು ಐವತ್ತೊಂಬತ್ತು) |
| 8. | ಕೆ. ನಾಗರಾಜ ಆಚಾರ್, ಸಹಾಯಕ ಸರ್ಕಾರಿ ಅಭಿಯೋಜಕರು-ವ-ಸಹಾಯಕ ಸರ್ಕಾರಿ ವಕೀಲರು, ಎಂ ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಸಿಂಧನೂರು. | 23.7.61 (ಇಪ್ಪತ್ತಮೂರು ಏಳು ಅರವತ್ತೊಂದು) |
| 9. | ಎಂ.ಎ. ಬ್ಯಾಳಿರೊಟ್ಟಿ, ಸಹಾಯಕ ಸರ್ಕಾರಿ ಅಭಿಯೋಜಕರು-ವ-ಸಹಾಯಕ ಸರ್ಕಾರಿ ವಕೀಲರು, ಎಂ ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಬೀಳಗಿ. | 8.10.57 (ಎಂಟು ಹತ್ತು ಐವತ್ತೇಳು) |
| 10. | ಬಿ.ಎ. ಗಣಿ, ಸಹಾಯಕ ಸರ್ಕಾರಿ ಅಭಿಯೋಜಕರು-ವ-ಸಹಾಯಕ ಸರ್ಕಾರಿ ವಕೀಲರು, ಎಂ ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಬನಹಟ್ಟಿ. | 1.9.57 (ಒಂದು ಒಂಬತ್ತು ಐವತ್ತೇಳು) |
| 11. | ಪೂಜಾರಿ ರುದ್ರಪ್ಪ, ಸಹಾಯಕ ಸರ್ಕಾರಿ ಅಭಿಯೋಜಕರು-ವ-ಸಹಾಯಕ ಸರ್ಕಾರಿ ವಕೀಲರು, ಅಧಿಕ ಎಂ ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ರಾಣಿಬೆನ್ನೂರು. | 23.7.58 (ಇಪ್ಪತ್ತಮೂರು ಏಳು ಐವತ್ತೆಂಟು) |
| 12. | ಬಿ.ವಿ. ಹುಚ್ಚರೆಡ್ಡಿ, ಸಹಾಯಕ ಸರ್ಕಾರಿ ಅಭಿಯೋಜಕರು-ವ-ಸಹಾಯಕ ಸರ್ಕಾರಿ ವಕೀಲರು, 2ನೇ ಅಧಿಕ ಎಂ ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಬಿಜಾಪುರ. | 1.6.59 (ಒಂದು ಆರು ಐವತ್ತೊಂಬತ್ತು) |
| 13. | ಎಂ.ಎಲ್. ಶೈಲಜ, ಸಹಾಯಕ ಸರ್ಕಾರಿ ಅಭಿಯೋಜಕರು-ವ-ಸಹಾಯಕ ಸರ್ಕಾರಿ ವಕೀಲರು, ಸಿಜಿ (ಜ್ಯೂ.ಡಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಕೊರಟಗೆರೆ. | 26.6.63 (ಇಪ್ಪತ್ತಾರು ಆರು ಅರವತ್ತಮೂರು) |
| 14. | ಬಿ.ಎಂ. ನಾಗರಾಜು, ಸಹಾಯಕ ಸರ್ಕಾರಿ ಅಭಿಯೋಜಕರು-ವ-ಸಹಾಯಕ ಸರ್ಕಾರಿ ವಕೀಲರು, ಸಿಜಿ (ಜ್ಯೂ.ಡಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಶ್ರೀನಿವಾಸಪುರ. | 1.6.59 (ಒಂದು ಆರು ಐವತ್ತೊಂಬತ್ತು) |
| 15. | ನಾಗರಾಜು, ಸಹಾಯಕ ಸರ್ಕಾರಿ ಅಭಿಯೋಜಕರು-ವ-ಸಹಾಯಕ ಸರ್ಕಾರಿ ವಕೀಲರು, ಸಿಜಿ (ಜ್ಯೂ.ಡಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಚಿಂತಾಮಣಿ. | 15.5.57 (ಹದಿನೈದು ಐದು ಐವತ್ತೇಳು) |
| 16. | ಆರ್. ಮಾರುತಿ, ಸಹಾಯಕ ಸರ್ಕಾರಿ ಅಭಿಯೋಜಕರು-ವ-ಸಹಾಯಕ ಸರ್ಕಾರಿ ವಕೀಲರು, ಸಿಜಿ (ಜ್ಯೂ.ಡಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಆನೇಕಲ್. | 1.6.54 (ಒಂದು ಆರು ಐವತ್ನಾಲ್ಕು) |
| 17. | ಬಿ. ರಂಗಸ್ವಾಮಿ, ಸಹಾಯಕ ಸರ್ಕಾರಿ ಅಭಿಯೋಜಕರು-ವ-ಸಹಾಯಕ ಸರ್ಕಾರಿ ವಕೀಲರು, ಸಿಜಿ (ಜ್ಯೂ.ಡಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ದೊಡ್ಡಬಳ್ಳಾಪುರ. | 5.6.63 (ಐದು ಆರು ಅರವತ್ತಮೂರು) |
| 18. | ಟಿ.ಹೆಚ್. ಲೋಲಾಕ್ಷಿ, ಸಹಾಯಕ ಸರ್ಕಾರಿ ಅಭಿಯೋಜಕರು-ವ-ಸಹಾಯಕ ಸರ್ಕಾರಿ ವಕೀಲರು, ಸಿಜಿ (ಜ್ಯೂ.ಡಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ನಂಜನಗೂಡು. | 26.11.66. (ಇಪ್ಪತ್ತಾರು ಹನ್ನೊಂದು ಅರವತ್ತಾರು) |
| 19. | ಬಿ. ಶೇಖರ್ ಶೆಟ್ಟಿ, ಸಹಾಯಕ ಸರ್ಕಾರಿ ಅಭಿಯೋಜಕರು-ವ-ಸಹಾಯಕ ಸರ್ಕಾರಿ ವಕೀಲರು, ಸಿಜಿ (ಜ್ಯೂ.ಡಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಹಾಸನ. | 17.4.64 (ಹದಿನೇಳು ನಾಲ್ಕು ಅರವತ್ನಾಲ್ಕು) |
| 20. | ಜುಡಿತ್ ಓಲ್ಗ ಮಾರ್ಗರೇಟ್ ಕ್ರಾಸ್ಟ್, ಸಹಾಯಕ ಸರ್ಕಾರಿ ಅಭಿಯೋಜಕರು-ವ-ಸಹಾಯಕ ಸರ್ಕಾರಿ ವಕೀಲರು, ಸಿಜಿ (ಜ್ಯೂ.ಡಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಹೊಳೆನರಸೀಪುರ. | 28.1.70 (ಇಪ್ಪತ್ತೆಂಟು ಒಂದು ಎಪ್ಪತ್ತು) |
| 21. | ವ್ಹಿ.ಎಂ.ಸುರೇಶ್ ಕುಮಾರ್, ಸಹಾಯಕ ಸರ್ಕಾರಿ ಅಭಿಯೋಜಕರು-ವ-ಸಹಾಯಕ ಸರ್ಕಾರಿ ವಕೀಲರು, ಸಿಜಿ (ಜ್ಯೂ.ಡಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಅರಸೀಕೆರೆ. | 22.7.66 (ಇಪ್ಪತ್ತೆರಡು ಏಳು ಅರವತ್ತಾರು) |
| 22. | ಹೆಚ್.ಎಂ.ರಘುಕುಮಾರ್, ಸಹಾಯಕ ಸರ್ಕಾರಿ ಅಭಿಯೋಜಕರು-ವ-ಸಹಾಯಕ ಸರ್ಕಾರಿ ವಕೀಲರು, ಸಿಜಿ (ಜ್ಯೂ.ಡಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಮಳ್ಳವಳ್ಳಿ. | 10.5.59 (ಹತ್ತು ಐದು ಐವತ್ತೊಂಬತ್ತು) |

| ಕ್ರ. ಸಂ. | ಅಧಿಕಾರಿಗಳ ಹೆಸರು, ಹುದ್ದೆ, ನೇಮಕಗೊಂಡ ಸ್ಥಳ ಶ್ರೀ:ಶ್ರೀಮತಿ | ಸರ್ಕಾರವು ಒಪ್ಪಿರುವ ಜನ್ಮ ದಿನಾಂಕ |
|---|---|---|
| 23. | ಡಿ. ಸುಜಾತ, ಸಹಾಯಕ ಸರ್ಕಾರಿ ಅಭಿಯೋಜಕರು-ವ-ಸಹಾಯಕ ಸರ್ಕಾರಿ ವಕೀಲರು, ಸಿಜಿ (ಜ್ಯೂ.ಡಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಮಂಡ್ಯ. | 4.4.64 (ನಾಲ್ಕು ನಾಲ್ಕು ಅರವತ್ನಾಲ್ಕು) |
| 24. | ಕೆ.ಆರ್. ಜಯಶ್ರೀ, ಸಹಾಯಕ ಸರ್ಕಾರಿ ಅಭಿಯೋಜಕರು-ವ-ಸಹಾಯಕ ಸರ್ಕಾರಿ ವಕೀಲರು, ಸಿಜಿ (ಜ್ಯೂ.ಡಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಸೊರಬ. | 27.8.65 (ಇಪ್ಪತ್ತೇಳು ಎಂಟು ಅರವತ್ತೈದು) |
| 25. | ಅಂಜಲಿದೇವಿ, ಸಹಾಯಕ ಸರ್ಕಾರಿ ಅಭಿಯೋಜಕರು-ವ-ಸಹಾಯಕ ಸರ್ಕಾರಿ ವಕೀಲರು, ಸಿಜಿ (ಜ್ಯೂ.ಡಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಸಿರಗುಪ್ಪ. | 10.5.69 (ಹತ್ತು ಐದು ಅರವತ್ತೊಂಬತ್ತು) |
| 26. | ಎಂ. ಚಂದ್ರಪ್ಪ, ಸಹಾಯಕ ಸರ್ಕಾರಿ ಅಭಿಯೋಜಕರು-ವ-ಸಹಾಯಕ ಸರ್ಕಾರಿ ವಕೀಲರು, ಸಿಜಿ (ಜ್ಯೂ.ಡಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಹಡಗಲಿ. | 1.6.61 (ಒಂದು ಆರು ಅರವತ್ತೊಂದು) |
| 27. | ಬಿ. ರಮೇಶ್, ಸಹಾಯಕ ಸರ್ಕಾರಿ ಅಭಿಯೋಜಕರು-ವ-ಸಹಾಯಕ ಸರ್ಕಾರಿ ವಕೀಲರು, ಸಿಜಿ (ಜ್ಯೂ.ಡಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಜಗಳೂರು. | 22.7.59 (ಇಪ್ಪತ್ತೆರಡು ಏಳು ಐವತ್ತೊಂಬತ್ತು) |
| 28. | ಹೆಚ್.ಡಿ.ಆನಂದ ಕುಮಾರ್ ಸಹಾಯಕ ಸರ್ಕಾರಿ ಅಭಿಯೋಜಕರು-ವ-ಸಹಾಯಕ ಸರ್ಕಾರಿ ವಕೀಲರು, ಸಿಜಿ (ಜ್ಯೂ.ಡಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ನರಸಿಂಹರಾಜಪುರ. | 13.10.62 (ಹದಿಮೂರು ಹತ್ತು ಅರವತ್ತೆರಡು) |
| 29. | ಹರಿಶ್ಚಂದ್ರ ಉದಿಯಾವರ್, ಸಹಾಯಕ ಸರ್ಕಾರಿ ಅಭಿಯೋಜಕರು-ವ-ಸಹಾಯಕ ಸರ್ಕಾರಿ ವಕೀಲರು, ಸಿಜಿ (ಜ್ಯೂ.ಡಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಭಟ್ಕಳ. | 2.5.65 (ಎರಡು ಐದು ಅರವತ್ತೈದು) |
| 30. | ಆರ್. ವಿ. ಭಟ್ಟ, ಸಹಾಯಕ ಸರ್ಕಾರಿ ಅಭಿಯೋಜಕರು-ವ-ಸಹಾಯಕ ಸರ್ಕಾರಿ ವಕೀಲರು, ಸಿಜಿ (ಜ್ಯೂ.ಡಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಮುಂಡಗೋಡು | 8.5.68 (ಎಂಟು ಐದು ಅರವತ್ತೆಂಟು) |
| 31. | ಎಸ್.ಎಂ. ಮುನವಳ್ಳಿ, ಸಹಾಯಕ ಸರ್ಕಾರಿ ಅಭಿಯೋಜಕರು-ವ-ಸಹಾಯಕ ಸರ್ಕಾರಿ ವಕೀಲರು, ಸಿಜಿ (ಜ್ಯೂ.ಡಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ರಾಮದುರ್ಗ. | 21.7.68 (ಇಪ್ಪತ್ತೊಂದು ಏಳು ಅರವತ್ತೆಂಟು) |
| 32. | ಬಿ.ಎಸ್. ಕೂಗುನವರ್, ಸಹಾಯಕ ಸರ್ಕಾರಿ ಅಭಿಯೋಜಕರು-ವ-ಸಹಾಯಕ ಸರ್ಕಾರಿ ವಕೀಲರು, ಸಿಜಿ (ಜ್ಯೂ.ಡಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ರಾಯಬಾಗ್. | 1.1.64 (ಒಂದು ಒಂದು ಅರವತ್ನಾಲ್ಕು) |
| 33. | ಎಸ್.ಎಸ್. ಲೋಕೂರ್, ಸಹಾಯಕ ಸರ್ಕಾರಿ ಅಭಿಯೋಜಕರು-ವ-ಸಹಾಯಕ ಸರ್ಕಾರಿ ವಕೀಲರು, ಸಿಜಿ (ಜ್ಯೂ.ಡಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಹಳಿಯಾಳ್. | 1.6.64 (ಒಂದು ಆರು ಅರವತ್ನಾಲ್ಕು) |
| 34. | ಎಸ್.ಪಿ ಹುಬ್ಬಳ್ಳಿ, ಸಹಾಯಕ ಸರ್ಕಾರಿ ಅಭಿಯೋಜಕರು-ವ-ಸಹಾಯಕ ಸರ್ಕಾರಿ ವಕೀಲರು, ಸಿಜಿ (ಜ್ಯೂ.ಡಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಹಾನಗಲ್. | 8.7.60 (ಎಂಟು ಏಳು ಅರವತ್ತು) |
| 35. | ಬಿ.ವೈ. ಕೆಂಭಾವಿ, ಸಹಾಯಕ ಸರ್ಕಾರಿ ಅಭಿಯೋಜಕರು-ವ-ಸಹಾಯಕ ಸರ್ಕಾರಿ ವಕೀಲರು, ಸಿಜಿ (ಜ್ಯೂ.ಡಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಮುಧೋಳ್. | 1.6.61 (ಒಂದು ಆರು ಅರವತ್ತೊಂದು) |
| 36. | ಸಫೀರ್ ಅಹಮದ್, ಸಹಾಯಕ ಸರ್ಕಾರಿ ಅಭಿಯೋಜಕರು-ವ-ಸಹಾಯಕ ಸರ್ಕಾರಿ ವಕೀಲರು, ಸಿಜಿ (ಜ್ಯೂ.ಡಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಸೇಡಂ. | 15.4.59 (ಹದಿನೈದು ನಾಲ್ಕು ಐವತ್ತೊಂಬತ್ತು) |
| 37. | ಎ.ಸಿ. ಕಾಮಕರ್, ಸಹಾಯಕ ಸರ್ಕಾರಿ ಅಭಿಯೋಜಕರು-ವ-ಸಹಾಯಕ ಸರ್ಕಾರಿ ವಕೀಲರು, ಸಿಜಿ (ಜ್ಯೂ.ಡಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಸಿರ್ಸಿ. | 13.3.60 (ಹದಿಮೂರು ಮೂರು ಅರವತ್ತು) |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ಎ. ಕುಲಕರ್ಣಿ**

ಪಿ.ಆರ್. 1071

ಸರ್ಕಾರದ ಅಧೀನ ಕಾರ್ಯದರ್ಶಿ, (ಪ್ರಭಾರ)

ಒಳಾಡಳಿತ ಇಲಾಖೆ. (ಕಾ. ಮತ್ತು ಸು. ಮತ್ತು ಅಭಿಯೋಗಗಳು)

**ವಿಷಯ:** ಶ್ರೀ ಮಲ್ಲರಾಜೇಗೌಡ, ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ. ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಹಿರಿಯೂರು ಇವರ ವಿರುದ್ಧ ಇಲಾಖಾ ವಿಚಾರಣೆ ಬಗ್ಗೆ.

**ಓದಲಾಗಿದೆ:**

1. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಕಾರಣ ಕೇಳುವ ಸೂಚನಾ ಪತ್ರ ಸಂಖ್ಯೆ:ಡಿಪಿಎನ್/ಕೇಂಸ/ಜಿ-19/1999-2000,ದಿನಾಂಕ:23.5.2000
2. ಅಧಿಕಾರಿಯವರ ಸಮಜಾಯಿಸಿ ಪತ್ರ ದಿನಾಂಕ:8.6.2000
3. ವಿಚಾರಣಾಧಿಕಾರಿ ಮತ್ತು/ಮಂಡನಾಧಿಕಾರಿಯವರ ನೇಮಕದ ಆದೇಶ ನಂ. ಡಿಪಿನ್ /ಕೇಂಸ/ಜಿ-09/1999-2000, ದಿನಾಂಕ:17.7.2000.
4. ಮಂಡನಾಧಿಕಾರಿಯವರನ್ನು ಬದಲಾಯಿಸಿ ನೇಮಿಸಿದ ಆದೇಶ ನಂ.ಡಿಪಿನ್ /ಕೇಂಸ/ಜಿ-09/1999-2000, ದಿನಾಂಕ:5.7.2002.

5. ವಿಚಾರಣಾಧಿಕಾರಿಯವರನ್ನು ಬದಲಾಯಿಸಿ ನೇಮಿಸಿದ ಆದೇಶ ನಂ.ಡಿಪಿನ್/ಕೇಂಸ/ಜಿ-09/1999-2000, ದಿನಾಂಕ:5.7.2002.
6. ಇಲಾಖಾ ವಿಚಾರಣಾ ವರದಿ ದಿನಾಂಕ:22.3.2003.
7. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಅವರ ಅರೆ ಸರ್ಕಾರಿ ಪತ್ರ ನಂ. ಡಿಪಿಎನ್ ಕೇಂಸ/ಜಿ-09/1999-2000, ದಿನಾಂಕ:11.12.2003.
8. 2ನೇ ಕಾರಣ ಕೇಳುವ ತಿಳುವಳಿಕೆ ಪತ್ರ ನಂ.ಲಾ 03 ಪಿಪಿಇ 2004 ದಿನಾಂಕ:5.4.2004.
9. ಅಧಿಕಾರಿಯವರ ಹೇಳಿಕೆ ಪತ್ರ ದಿನಾಂಕ:29.1.2004.

**ಪ್ರಸ್ತಾವನೆ**

ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರು, ಬೆಂಗಳೂರು ರವರು ಮೇಲೆ (1)ರಲ್ಲಿ ಓದಲಾಗಿರುವ ಪತ್ರದಲ್ಲಿ ಶ್ರೀ ಮಲ್ಲರಾಜೇಗೌಡ, ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ. ಮತ್ತು ಜೆ.ಎಂ.ಎಫ್.ಸಿ.ನ್ಯಾಯಾಲಯ, ಹಿರಿಯೂರು ಇವರು ಗುಂಡ್ಲುಪೇಟೆ ಸಹಾಯಕ ಸರ್ಕಾರಿ ಅಭಿಯೋಜಕರಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ,(1) ನ್ಯಾಯಾಲಯದಲ್ಲಿ 1998ನೇ ಮಾರ್ಚ್ ತಿಂಗಳಲ್ಲಿ ಬಿಡುಗಡೆಯಾಗಿದ್ದ ಮೊಕದ್ದಮೆಗಳ ಪ್ರಕರಣಗಳಲ್ಲಿ ತೀರ್ಪಿನ ದೃಢೀಕರಿಸಲಾದ ನಕಲುಗಳನ್ನು ನ್ಯಾಯಾಲಯದಿಂದ ಪಡೆದುಕೊಂಡಿದ್ದು, ಸದರಿ ಕಡತಗಳನ್ನು ಅಭಿಪ್ರಾಯಗಳೊಂದಿಗೆ ವಿಭಾಗ ಕಛೇರಿಗೆ ಸಲ್ಲಿಸದೇ ಬೇಜವಾಬ್ದಾರಿಯಿಂದ ನಡೆದುಕೊಂಡು ಕರ್ತವ್ಯ ಚ್ಯುತಿಯನ್ನೆಸಗಿದ ಬಗ್ಗೆ; (2) ಗುಂಡ್ಲುಪೇಟೆ ಸಹಾಯಕ ಸರ್ಕಾರಿ ಅಭಿಯೋಜಕರಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ಸಿ.ಸಿ ನಂ. 342/97ರ ಪ್ರಕರಣದ ದೋಷಾರೋಪಣ ಪಟ್ಟಿಯನ್ನು ಸರಿಯಾಗಿ ಪರಿಶೀಲಿಸದೇ ನ್ಯೂನತರಯನ್ನು ಎಸಗಿ ಕರ್ತವ್ಯದಲ್ಲಿ ನಿರ್ಲಕ್ಷತನ ತೋರಿತುವ ಬಗ್ಗೆ; (3) ಹೆಗ್ಗಡದೇವನಕೋಟೆ ಜೆಎಂಎಫ್‌ಸಿ ನ್ಯಾಯಾಲಯದ ಸಿ.ಸಿ.ನಂ. 53/99ರಲ್ಲಿ ದಿನಾಂಕ:28.6.1999ರಂದು ನ್ಯಾಯಾಲಯದ ಮುಂದೆ ಹಾಜರಾಗದೆ ಇದ್ದ ಕಾರಣ ನ್ಯಾಯಾಲಯವು ಕೆಲವು ಸಾಕ್ಷಿಗಳನ್ನು ಡಿಸ್ ಚಾರ್ಜ್ ಮಾಡಿದ್ದು, ಸದರಿ ಪ್ರಕಣದಲ್ಲಿ ಸದರಿ ಅಧಿಕಾರಿಯವರು ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಿ ಪ್ರಕಣದ ಸಾಕ್ಷಿಗಳಿಗೆ ಪುನಃ ಸಮನ್ಸ್ ನೀಡುವಂತೆ ಕೋರದೆ ಕರ್ತವ್ಯದಲ್ಲಿ ನಿರ್ಲಕ್ಷ್ಯತನ ತೋರಿ ಬೇಜವಾಬ್ದಾರಿಯಿಂದ ನಡೆದುಕೊಂಡಿರುವ ಬಗ್ಗೆ; (4) ಹೆಗ್ಗಡದೇವನಕೋಟೆ ಜೆಎಂಎಫ್‌ಸಿ ನ್ಯಾಯಾಲಯದ ಸಿ.ಸಿ. ನಂ. 8/98 ಹಾಗೂ 9/98ರ ಎರಡು ಪ್ರಕರಣಗಳಲ್ಲಿ ಸದರಿ ಅಧಿಕಾರಿಯವರು ಸಾಕ್ಷಿದಾರರನ್ನು ವಿಚಾರಣೆ ಮಾಡುವಾಗ ಸರಿಯಾದ ಕ್ರಮಅನುಸರಿಸಿಲ್ಲ ಹಾಗೂ ಸಾಕ್ಷಿಗಳಿಗೆ ಸರಿಯಾಗಿ ಸಲಹೆ ಸೂಚನೆಗಳನ್ನು ನೀಡಿರುವುದಿಲ್ಲ ಮತ್ತು ಸಾಕ್ಷಿಗಳು ಮೊಕದ್ದಮೆ ಸಂಬಂಧವಾಗಿ ಸದರಿ ಅಧಿಕಾರಿಯವರ ಕಛೇರಿಗೆ ಬಂದಾಗ ಅವರುಗಳಿಗೆ ಪ್ರಕಣದ ಬಗ್ಗೆ ಯಾವುದೇ ಮಾಹಿತಿ ನೀಡದೆ ಕಛೇರಿಯಿಂದ ಹೊರಗೆ ನಿಲ್ಲಿಸಿ ಸಾರ್ವಜನಿಕರೊಂದಿಗೆ ಸರಿಯಾಗಿ ವರ್ತಿಸದೇ ಕರ್ತವ್ಯದಲ್ಲಿ ನಿರ್ಲಕ್ಷ್ಯತನ ತೋರಿ ದುರ್ನಡತೆಯನ್ನೆಸಗಿರುವ ಬಗ್ಗೆ ಮತ್ತು (5) ಹೆಗ್ಗಡದೇವನಕೋಟೆ ಜೆ.ಎಂ.ಎಫ್.ಸಿ. ನ್ಯಾಯಾಲಯದ ಸಿ.ಸಿ ನಂ. 8/98 ಮತ್ತು 9/98ರ ಪ್ರಕರಣಗಳ ನ್ಯಾಯಾಲಯದ ಅರ್ಡರ್‌ಶೀಟ್‌ನ ಜೆರಾಕ್ಸ್ ಪ್ರತಿಗಳನ್ನು ಪಡೆಯುವಂತೆ ಸದರಿ ಅಧಿಕಾರಿಯವರಿಗೆ ಕೇಂದ್ರ ಕಛೇರಿಯಿಂದ ದಿನಾಂಕ:5.11.99ರಂದು ಕಳುಹಿಸಿ ಲಿಖಿತ ಸಮಾಜಾಯಿಸಿ ಸಲ್ಲಿಸಲು ಸೂಚಿಸಿದ್ದರೂ ಸದರಿ ಅಧಿಕಾರಿಯವರು ದಿನಾಂಕ:15.11.1999ರ ವಿವರಣೆಯಲ್ಲಿ ಮೇಲ್ಕಂಡ ಎರಡೂ ಪ್ರಕರಣಗಳ ಮಾಹಿತಿಯನ್ನು ಮುಚ್ಚಿಟ್ಟು ಬೇರೆ ಎರಡು ಪ್ರಕರಣಗಳಿಗೆ ಸಂಬಂಧಿಸಿದಂತೆ ವಿವರಣೆ ನೀಡಿ ಮೇಲಧಿಕಾರಿಗಳ ಆದೇಶಗಳನ್ನು ಉಲ್ಲಂಘಿಸಿ ಕರ್ತವ್ಯವನ್ನು ಸರಿಯಾಗಿ ನಿರ್ವಹಿಸದೆ ಕರ್ತವ್ಯದಲ್ಲಿ ನಿರ್ಲಕ್ಷ್ಯತನ ತೋರಿತುವ ಬಗ್ಗೆ, ಒಟ್ಟು 5 ಆರೋಪಗಳ ಬಗ್ಗೆ ಕಾರಣ ಕೇಳುವ ಸೂಚನಾ ಪತ್ರವನ್ನು ನೀಡಲಾಗಿತ್ತು. ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಆರೋಪಿತ ಅಧಿಕಾರಿಯು ಲಿಖಿತ ಹೇಳಿಕೆಯನ್ನು ಸಲ್ಲಿಸಿರುತ್ತಾರೆ. ಈ ಬಗ್ಗೆ ಪರಿಶೀಲಿಸಿ, ವಿವರಣೆ ಸಮಂಜಸವಾಗಿಲ್ಲದೇ ಇದ್ದುದರಿಂದ ಆರೋಪಗಳ ಬಗ್ಗೆ ಸತ್ಯಾಸತ್ಯತೆಯನ್ನು ಕಂಡುಕೊಳ್ಳುವ ಸಲುವಾಗಿ ಮೇಲೆ (3)ರಲ್ಲಿ ಓದಲಾಗಿರುವ ಆದೇಶದಲ್ಲಿ ವಿಚಾರಣಾಧಿಕಾರಿ ಮತ್ತು ಮಂಡಾನಾಧಿಕಾರಿಗಳನ್ನು ನೇಮಕ ಮಾಡಲಾಗಿರುತ್ತದೆ.

ಮೇಲೆ (6)ರಲ್ಲಿ ಓದಲಾಗಿರುವ ದಿನಾಂಕ:22.3.2003ರಲ್ಲಿ ವಿಚಾರಣಾಧಿಕಾರಿಗಳು ಇಲಾಖಾ ವಿಚಾರಣಾ ವರದಿಯನ್ನು ಸಲ್ಲಿಸಿರುತ್ತಾರೆ. ಆರೋಪಿತ ಅಧಿಕಾರಿಯವರ ವಿರುದ್ಧ ಮಾಡಲಾಗಿದ್ದ 5 ಆರೋಪಗಳ ಪೈಕಿ, ಆರೋಪ 2,4 ಮತ್ತು 5 ಗಳು ರುಜುವಾತಾಗಿರುವುದಿಲ್ಲ, ಆದರೆ 1ನೇ ಮತ್ತು 3ನೇ ಆರೋಪವು ರುಜುವಾತಾಗಿರುತ್ತದೆ. ಸಹಾಯಕ ಸರ್ಕಾರಿ ಅಭಿಯೋಜಕರಿಗೆ ಲಘುದಂಡನೆಯನ್ನು ನೀಡುವ ಅಧಿಕಾರವನ್ನು ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖಾ ನಿರ್ದೇಶಕರಿಗೆ ನೀಡಲಾಗಿದೆ. ಆದರೆ, ಈ ಪ್ರಕರಣದಲ್ಲಿ ನಿರ್ದೇಶಕರು ಸಾಕ್ಷಿದಾರನಾಗಿರುವುದರಿಂದ ಶಿಸ್ತು ಪ್ರಾಧಿಕಾರಿಯಾಗಿ ಆದೇಶ ಹೊರಡಿಸಲು ಅವಕಾಶವಿಲ್ಲದೆ ಇರುವುದರಿಂದ ಸೂಕ್ತ ಆದೇಶವನ್ನು ಹೊರಡಿಸುವಂತೆ ಮೇಲೆ ಓದಲಾದ (7)ರ ಪತ್ರದಲ್ಲಿ ಕೋರಿರುತ್ತಾರೆ.

ಸರ್ಕಾರವು ಈ ಪ್ರಕರಣವನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ನಂ. ಒಇ 692 ಪಿಪಿಇ 2005, ಬೆಂಗಳೂರು, ದಿನಾಂಕ: 17ನೇ ಜುಲೈ 2006**

ಶ್ರೀ ಮಲ್ಲರಾಜೇಗೌಡ, ಸಹಾಯಕ ಸರ್ಕಾರಿ ಅಭಿಯೋಜಕರು, ಸಿಜೆ (ಕಿವಿ) ಜೆಎಂಎಫ್‌ಸಿ ನ್ಯಾಯಾಲಯ. ಹಿರಿಯೂರು ಇವರು ಹಿಂದೆ ಸಹಾಯಕ ಸರ್ಕಾರಿ ಅಭಿಯೋಜಕರು, ಜೆಎಂಎಫ್‌ಸಿ ನ್ಯಾಯಾಲಯ, ಹೆಗ್ಗಡದೇವನಕೋಟೆ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ಕರ್ತವ್ಯ ನಿರ್ಲಕ್ಷೆ ಮಾಡಿರುತ್ತಾರೆಂದು ಮಾಡಲಾಗಿರುವ 5 (ಐದು) ಆರೋಪಗಳ ಪೈಕಿ 2 (ಎರಡು) ಆರೋಪಗಳು (ಆರೋಪ 1 ಮತ್ತು 3) ಸಾಬೀತಾಗಿರುವುದರಿಂದ, ಸದರಿ ಆರೋಪಿತ ಅಧಿಕಾರಿಯವರಿಗೆ ಕರ್ನಾಟಕ ಸರ್ಕಾರ ಸೇವಾ ನಿಯಮ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ 1957ರ ನಿಯಮ 8(iii) ರಂತೆ ಒಂದು ವಾರ್ಷಿಕ ವೇತನ ಬಡ್ತಿಯನ್ನು ಸಂಚಿತ ಪರಿಣಾಮವಿಲ್ಲದಂತೆ ತಡೆಹಿಡಿಯಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ಎ. ಕುಲಕರ್ಣಿ**

ಪಿ.ಆರ್. 1072

ಸರ್ಕಾರದ ಅಧೀನ ಕಾರ್ಯದರ್ಶಿ, (ಪ್ರಭಾರ)

ಒಳಾಡಳಿತ ಇಲಾಖೆ. (ಕಾ. ಮತ್ತು ಸು. ಮತ್ತು ಅಭಿಯೋಗಗಳು)

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ:** ಹಾವೇರಿ ಪಂಚಾಯತ್ ರಾಜ್ ಇಂಜಿನಿಂಯರಿಂಗ್ ವಿಭಾಗದಲ್ಲಿ ಪ್ರವಾಸ ಭತ್ಯೆ ನಕಲಿ ಬಿಲ್‌ಗಳನ್ನು ತಯಾರಿಸಿ ಸರ್ಕಾರದ ಹಣ ದುರುಪಯೋಗ ಮಾಡಿರುವ ಬಗ್ಗೆ-ವಿಚಾರಣಾಧಿಕಾರಿಗಳ ನೇಮಕದ ಆದೇಶ

**ಓದಲಾಗಿದೆ:**
1. ಖಜಾನೆ ನಿರ್ದೇಶಕರು, ಬೆಂಗಳೂರು ಇವರ ಅ.ಸ.ಪತ್ರ ಸಂ. ಖನಿ:ಖನಿತ:100:2004-05, ದಿ :27.11.2004.
2. ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಹಾವೇರಿ ಇವರ ಪತ್ರ ಸಂ. ಹಾಜಿಪಂ ಸಿಬ್ಬಂದಿ (2):ಇವಿ:ವಹಿ-9:2004-05, ದಿ:4.12.2004.
3. ಅ.ಟಿ.ಸಂಖ್ಯೆ. ಆಇ:284 ಆಖಇ 2004, ದಿ:27.6.2005.
4. ಸರ್ಕಾರದ ಪತ್ರ ಸಂಖ್ಯೆ:ಗ್ರಾಅಪ 229 ಜಿಪ 04, ದಿ:29.10.2005.
5. ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಹಾವೇರಿ ಇವರ ಪತ್ರ ಸಂ. ಹಾಜಿಪಂ ಸಿಬ್ಬಂದಿ (2):ಇವಿ:ವಹಿ-9:2004-05, ದಿ:5.11.2005.
6. ಸರ್ಕಾರದ ಪತ್ರ ಸಂಖ್ಯೆ:ಗ್ರಾಅಪ 229 ಜಿಪ 04, ದಿ:20.2.2006.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ(1) ರ ದಿ:27.11.04ರ ಅ.ಸ. ಪತ್ರದಲ್ಲಿ ಖಜಾನೆ ನಿರ್ದೇಶಕರು, ಹಾವೇರಿ ಪಂಚಾಯತ್ ರಾಜ್ ಇಂಜಿನಿಯರಿಂಗ್ ವಿಭಾಗದಲ್ಲಿ ಪ್ರವಾಸ ಭತ್ಯೆಯ ಬಿಲ್ಲುಗಳ ಅಕ್ರಮದ ಬಗ್ಗೆ ಪ್ರಾಥಮಿಕ ತನಿಖೆ ನಡೆಸಿದ್ದು, ಸದರಿ ವಿಭಾಗದಲ್ಲಿ ಡಿಸೆಂಬರ್ 2002ರಿಂದ ನವೆಂಬರ್ 2004ರವರೆಗೆ 216 ಬಿಲ್ಲುಗಳಲ್ಲಿ ಒಟ್ಟು 77.08 ಲಕ್ಷ ರೂ. ಗಳ ಪ್ರವಾಸ ಭತ್ಯೆ ಬಿಲ್ಲುಗಳನ್ನು ಸೆಳೆದಿದೆ.ರಾಜ್ಯದ ಖಜಾನೆಗಳನ್ನು ನವೆಂಬರ್ 2002ರಿಂದ ಗಣಕೀಕರಿಸಿದ್ದು, ಅಂದಿನಿಂದ ಪ್ರತಿಯೊಂದು ಬಿಲ್ಲುಗಳ ಮಾಹಿತಿಯು ಲಭ್ಯವಿದ್ದರಿಂದ ಈ ಅವಧಿಯ ವಿವರಗಳನ್ನು ಕಂಪ್ಯೂಟರ್‌ನಲ್ಲಿ ಸಂಗ್ರಹಿಸಿದೆ. ಇದನ್ನು ಗಮನಿಸಿದಾಗ ಕಳೆದ ನಾಲ್ಕು ಐದು ವರ್ಷಗಳಲ್ಲಿ ಈ ರೀತಿಯ ಇಂತಹದೇ ಅಕ್ರಮ ಪಾವತಿ ಬಗ್ಗೆಯೂ ಸಂಶಯಕ್ಕೆ ಎಡೆಮಾಡಿದೆ. ಈ ಒಂದು ಅಕ್ರಮದಲ್ಲಿ ಜಿಲ್ಲಾ ಖಜಾನೆಯ ಹಾಗೂ ಪಂಚಾಯತ್‌ರಾಜ್ ಇಂಜಿನಿಯರಿಂಗ್ ವಿಭಾಗದ ಅಧಿಕಾರಿ/ಸಿಬ್ಬಂದಿಗಳು ಭಾಗಿಯಾಗಿರುವ ಸಂಭವವಿರುವುದರಿಂದ ಈ ಬಗ್ಗೆ ಸೂಕ್ತ ಪ್ರಾಧಿಕಾರದಿಂದ ತನಿಖೆ ಹಾಗೂ ಇಲಾಖಾ ವಿಚಾರಣೆ ನಡೆಸಬೇಕೆಂದು ಪ್ರಸ್ತಾಪಿಸಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ(2)ರ ದಿ:4.12.2004 ಪತ್ರದಲ್ಲಿ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಹಾವೇರಿ ಇವರು ಒಟ್ಟಾರೆಯಾಗಿ ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ವಿಭಾಗ ಹಾವೇರಿಯಲ್ಲಿ 2002-03, 2003-04 ಮತ್ತು 2004-05ನೇ ಆರ್ಥಿಕ ವರ್ಷದಲ್ಲಿ ಒಟ್ಟು ರೂ.77,08,770-00ಗಳ ಮೊತ್ತದ ಪ್ರವಾಸ ಭತ್ಯೆಯ ಬಿಲ್ಲುಗಳನ್ನು ತಯಾರಿಸಿ ಖಜಾನೆಯಿಂದ ನಗದೀಕರಿಸಿಕೊಂಡು ದುರುಪಯೋಗ ಪಡೆಸಿಕೊಂಡಿರುತ್ತಾರೆ. ಇದರ ಈ ಪೈಕಿ ರೂ.25,71,760-00ಗಳನ್ನು ಶ್ರೀ ಓ ಲಕ್ಷ್ಮಣ, ವ್ಯವಸ್ಥಾಪಕರು ಮರಳಿ ಸರ್ಕಾರಕ್ಕೆ ಜಮೆ ಮಾಡಿರುತ್ತಾರೆ. ಇಂತಹ ಅಗಾಧ ಪ್ರಮಾಣದ ಹಣಕಾಸಿನ ದುರುಪಯೋಗಕ್ಕೆ ನೇರವಾಗಿ ಇವರು ಜವಾಬ್ದಾರರಾಗುತ್ತಾರೆ. ಇನ್ನುಳಿದಂತೆ ಅಧೀನ ಸಿಬ್ಬಂದಿಯವರು ನಿಯಮಬಾಹಿರ ಮತ್ತು ಅಕ್ರಮವಾಗಿ ತಯಾರಿಸಿದ ಬಿಲ್ಲುಗಳ ಪರಿಶೀಲನೆ, ನಗದು ಪುಸ್ತಕದಲ್ಲಿ ಅಂಕಿ ಅಂಶಗಳನ್ನು ದಾಖಲೆಗಳೊಂದಿಗೆ ತಾಳೆ ಮಾಡಿ ನೋಡುವ ತಮ್ಮ ಕರ್ತವ್ಯವನ್ನು ನಿರ್ವಹಿಸುವಲ್ಲಿ ಕಾರ್ಯಾಲಯದ ಮುಖ್ಯಸ್ಥರು ಬೇಜವಾಬ್ದಾರಿತನವನ್ನು ತೋರಿಸಿದ್ದಾರೆ, ನಗಧಿಕರಿಸಿದ ನಂತರ ಬಂದಿರುವ ಬಿಲ್ಲುಗಳನ್ನು ಜಿಲ್ಲಾ ಪಂಚಾಯತಿಯ ಲೆಕ್ಕ ಶಾಖೆಯಲ್ಲಿ ಮೇಲೆ ವಿವರಿಸಿದಂತೆ ಆಗಿಂದಾಗ್ಗೆ ಪರಿಶೀಲನೆ ಮಾಡದೇ ಇರುವುದಕ್ಕೆ ಲೆಕ್ಕ ಶಾಖೆಯ ಅಧಿಕಾರಿಗಳು ಸಹ ಕರ್ತವ್ಯದಲ್ಲಿ ನಿರ್ಲಕ್ಷತನ ತೋರಿಸಿ, ಈ ಆರ್ಥಿಕ ಅವ್ಯವಹಾರ ಹಾಗೂ ಅಗಾಧ ಪ್ರಮಾಣದಲ್ಲಿ ಹಣಕಾಸಿನ ದುರುಪಯೋಗವಾಗುವುದಕ್ಕೆ ಪರೋಕ್ಷವಾಗಿ ಕಾರಣರಾಗಿದ್ದಾರೆ ಎಂದು ತಿಳಿಸಿ ಪ್ರಕರಣದ ತನಿಖಾವರದಿಯನ್ನು ಮುಂದಿನ ಕ್ರಮಕ್ಕಾಗಿ ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ(3)ರ ದಿ:27.6.05ರ ಅ.ಟಿ.ಯಲ್ಲಿ ಆರ್ಥಿಕ ಇಲಾಖೆಯು ಹಾವೇರಿ ಜಿಲ್ಲಾ ಖಜಾನೆಯ ಕೆಳಕಂಡ ಅಧಿಕಾರಿ/ಸಿಬ್ಬಂದಿ ವಿರುದ್ಧ ಜಂಟಿ ಇಲಾಖಾ ವಿಚಾರಣೆಯನ್ನು ನಡೆಸಬೇಕೆಂದು ಕೋರಿ ದೋಷಾರೋಪಣಾ ಪಟ್ಟಿಯನ್ನು ಕಳುಹಿಸಿ ಪಂಚಾಯತ್ ರಾಜ್ ಇಂಜಿನಿಯರಿಂಗ್ ವಿಭಾಗದ ಸಿಬ್ಬಂದಿ ಹಾಗೂ ಖಜಾನೆ ಇಲಾಕೆಯ ಸಿಬ್ಬಂದಿಗಳನ್ನು ಒಟ್ಟುಗೂಡಿಸಿ ಜಂಟಿ ಇಲಾಖಾ ವಿಚಾರಣೆ ನಡೆಸುವಂತೆ ಕೋರಿದೆ.

1. ಶ್ರೀ ಜೆ. ರುಕ್ಮಾಂಗದನ್, ಅಂದಿನ ಪತ್ರಾಂಕಿತ ಉಪ ಖಜಾನಾಧಿಕಾರಿಗಳು, ಸವಣೂರು.
2. ಶ್ರೀ ಆರ್.ಎನ್. ದೇಶಪಾಂಡೆ, ಮುಖ್ಯ ಲೆಕ್ಕಿಗರು, ಜಿಲ್ಲಾ ಖಜಾನೆ, ಹಾವೇರಿ.
3. ಶ್ರೀ. ಎ.ವೈ. ಮನ್ವಾಚಾರ್ಯ, ಮುಖ್ಯ ಲೆಕ್ಕಿಗರು, ಜಿಲ್ಲಾ ಖಜಾನೆ, ಹಾವೇರಿ.
4. ಶ್ರೀ ಎಂ.ಎಂ. ಮುಲ್ಲಾ ,ದ್ವಿ.ದ.ಸ. ಜಿಲ್ಲಾ ಖಜಾನೆ, ಹಾವೇರಿ.

ಮೇಲೆ ಓದಲಾದ ಕ್ರಮ ಸಂಖ್ಯೆ (4)ರ ದಿ:29.10.05ರ ಸರ್ಕಾರದ ಪತ್ರದಲ್ಲಿ ಮೇಲ್ಕಂಡ ನಾಲ್ಕು ಮಂದಿ ಖಜಾನೆ ಇಲಾಖೆಯ ಅಧಿಕಾರಿ/ಸಿಬ್ಬಂದಿಗಳಿಗೆ ದೋಷಾರೋಪಣಾ ಪಟ್ಟಿಯೊಂದಿಗೆ ಕಾರಣ ಕೇಳುವ ನೋಟೀಸನ್ನು ಜಾರಿಮಾಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (5) ರ ದಿ:05.11.2005 ಪತ್ರದಲ್ಲಿ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್,ಹಾವೇರಿ ಇವರು ಈ ಪ್ರಕರಣ ನಡೆದ ಅವಧಿಯಲ್ಲಿ ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ವಿಭಾಗ, ಹಾವೇರಿಯಲ್ಲಿ ಕಾರ್ಯನಿರ್ವಹಿಸಿದ ಈ ಕೆಳಕಂಡ ಅಧಿಕಾರಿ/ನೌಕರರ ವಿರುದ್ಧ ಜಂಟಿ ಇಲಾಖಾ ವಿಚಾರಣೆಯನ್ನು ನಡೆಸಲು ದೋಷಾರೋಪಣಾ ಪಟ್ಟಿಗಳನ್ನು ಸರ್ಕಾರಕ್ಕೆ ಕಳುಹಿಸುತ್ತಾರೆ.

1. ಶ್ರೀ ಟಿ. ವೆಂಕಟೇಶ್ವರ, ಹಿಂದಿನ ಕಾರ್ಯನಿರ್ವಾಹಕ ಇಂಜಿನಿಯರ್.
2. ಶ್ರೀ ಪಿ.ಬಿ. ಹೊಳೆಯಾಚಿ, ಹಿಂದಿನ ಕಾರ್ಯನಿರ್ವಾಹಕ ಇಂಜಿನಿಯರ್.
3. ಶ್ರೀ ಎಸ್.ಎನ್. ಪ್ರಕಾಶ, ಹಿಂದಿನ ಕಾರ್ಯನಿರ್ವಾಹಕ ಇಂಜಿನಿಯರ್.
4. ಶ್ರೀ ಓ. ಲಕ್ಷ್ಮಣ, ವ್ಯವಸ್ಥಾಪಕರು (ಅಮಾನತ್ತಿನಲ್ಲಿರುವ)
5. ಶ್ರೀ ಗಿರಿಯಪ್ಪ, ಹಿಂದಿನ ಲೆಕ್ಕ ಪರಿಶೋಧನಾಧಿಕಾರಿ.
6. ಶ್ರೀ ಆರ್.ಎಂ. ಯರೇಶಿಮಿ, ಹಿಂದಿನ ಪ್ರಭಾರಿ ಲೆಕ್ಕಪರಿಶೋಧನಾಧಿಕಾರಿ.
7. ಶ್ರೀ ಜೆ.ಸಿ. ಕೀರ್ತಿ, ಹಿಂದಿನ ಲೆಕ್ಕ ಪರಿಶೋಧನಾಧಿಕಾರಿ.
8. ಶ್ರೀ ಪಿ.ಜಿ. ಬೋರಗಾವ, ಹಿಂದಿನ ಮುಖ್ಯ ಲೆಕ್ಕಾಧಿಕಾರಿಗಳು, ಜಿ.ಪಂ. ಹಾವೇರಿ.

ಮೇಲೆ ಓದಲಾದ ಕ್ರಮ ಸಂಖ್ಯೆ (6)ರ ದಿ. 20.2.2006 ಪತ್ರದಲ್ಲಿ ಸರ್ಕಾರವು ಮೇಲೆ ತಿಳಿಸಲಾದ ಎಂಟು ಮಂದಿ ಅಧಿಕಾರಿ/ನೌಕರರುಗಳಿಗೆ ದೋಷಾರೋಪಣಾ ಪಟ್ಟಿಯೊಂದಿಗೆ ಕಾರಣ ಕೇಳುವ ನೋಟೀಸನ್ನು ಜಾರಿ ಮಾಡಲಾಗಿತ್ತು.

ದೋಷಾರೋಪಣಾ ಪಟ್ಟಿಯೊಂದಿಗೆ ಕಾರಣ ಕೇಳುವ ನೋಟೀಸನ್ನು ಜಾರಿ ಮಾಡಲಾದ ಖಜಾನೆ ಇಲಾಖೆಯ ಹಾಗೂ ಪಂಚಾಯತ್ ರಾಜ್ ಇಂಜಿನಿಯರಿಂಗ್ ವಿಭಾಗ, ಹಾವೇರಿ ಕಚೇರಿಯ ಅಧಿಕಾರಿ/ಸಿಬ್ಬಂದಿಗಳು ಸರ್ಕಾರಕ್ಕೆ ಲಿಖಿತ ಹೇಳಿಕೆ ಸಲ್ಲಿಸಿ ತಮ್ಮ ಮೇಲಿನ ದೋಷಾ ರೋಪಣೆಯನ್ನು ನಿರಾಕರಿಸಿರುತ್ತಾರೆ. ಆದುದರಿಂದ ಸರ್ಕಾರವು ಪ್ರಕರಣದ ಸತ್ಯಾಸತ್ಯತೆಯನ್ನರಿಯುವ ಸಲುವಾಗಿ ಪ್ರಕರಣದಲ್ಲಿ ಜಂಟಿ ಇಲಾಖಾ ವಿಚಾರಣೆಯನ್ನು ನಡೆಸಲು ತೀರ್ಮಾನಿಸಿ ಕೆಳಕಂಡಂತೆ ಆದೇಶಿಸಿದೆ.

**ಆದೇಶ ಸಂಖ್ಯೆ ಗ್ರಾಅಪ 229 ಜಿಪಅ 04, ಬೆಂಗಳೂರು, ದಿನಾಂಕ: 11ನೇ ಜುಲೈ 2006**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಈ ಕೆಳಕಂಡ ಅಧಿಕಾರಿ/ಸಿಬ್ಬಂದಿಗಳ ಮೇಲಿನ ಆಪಾದನೆಗಳ ಬಗ್ಗೆ ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ 1957ರ ನಿಯಮ 11ರಲ್ಲಿ ನಿಗಧಿಪಡಿಸಲಾದ ವಿಧಿವಿಧಾನಗಳನ್ನು ಅನುಸರಿಸಿ ನಿಯಮ 13ರನ್ವಯ ವಿವರವಾದ ಜಂಟಿ ಇಲಾಖಾ ವಿಚಾರಣೆ ನಡೆಸಲು ನಿಯಮ 11 (2)ರ ರೀತ್ಯ ಶ್ರೀ ಎನ್.ಎಸ್. ಸಂಗೊಳ್ಳಿ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ಮತ್ತು ನಿಯಮ 11 (5)ರ ರೀತ್ಯ ಉಪ ಕಾರ್ಯದರ್ಶಿ (ಆಡಳಿತ), ಜಿಲ್ಲಾಪಂಚಾಯತ್, ಹಾವೇರಿ ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿ ಸರ್ಕಾರವು ಆದೇಶಿಸಿದೆ.

1. ಶ್ರೀ ಜೆ. ರುಕ್ಮಾಂಗದನ್, ಅಂದಿನ ಪತ್ರಾಂಕಿತ ಉಪ ಖಜಾನಾಧಿಕಾರಿಗಳು, ಸವಣೂರು.
2. ಶ್ರೀ ಆರ್.ಎನ್. ದೇಶಪಾಂಡೆ, ಮುಖ್ಯ ಲೆಕ್ಕಿಗರು, ಜಿಲ್ಲಾ ಖಜಾನೆ, ಹಾವೇರಿ.
3. ಶ್ರೀ. ಎ.ವೈ. ಮನ್ವಾಚಾರ್ಯ, ಮುಖ್ಯ ಲೆಕ್ಕಿಗರು, ಜಿಲ್ಲಾ ಖಜಾನೆ, ಹಾವೇರಿ.
4. ಶ್ರೀ ಎಂ.ಎಂ. ಮುಲ್ಲಾ ,ದ್ವಿ.ದ.ಸ. ಜಿಲ್ಲಾ ಖಜಾನೆ, ಹಾವೇರಿ.
5. ಶ್ರೀ ಟಿ. ವೆಂಕಟೇಶ್ವರ, ಹಿಂದಿನ ಕಾರ್ಯನಿರ್ವಾಹಕ ಇಂಜಿನಿಯರ್.
6. ಶ್ರೀ ಪಿ.ಬಿ. ಹೊಳೆಯಾಚಿ, ಹಿಂದಿನ ಕಾರ್ಯನಿರ್ವಾಹಕ ಇಂಜಿನಿಯರ್.
7. ಶ್ರೀ ಎಸ್.ಎನ್. ಪ್ರಕಾಶ, ಹಿಂದಿನ ಕಾರ್ಯನಿರ್ವಾಹಕ ಇಂಜಿನಿಯರ್.
8. ಶ್ರೀ ಓ. ಲಕ್ಷ್ಮಣ, ವ್ಯವಸ್ಥಾಪಕರು(ಅಮಾನತ್ತಿನಲ್ಲಿರುವ)
9. ಶ್ರೀ ಗಿರಿಯಪ್ಪ, ಹಿಂದಿನ ಲೆಕ್ಕ ಪರಿಶೋಧನಾಧಿಕಾರಿ.
10. ಶ್ರೀ ಆರ್.ಎಂ. ಯರೇಶಿಮಿ, ಹಿಂದಿನ ಪ್ರಭಾರಿ ಲೆಕ್ಕಪರಿಶೋಧನಾಧಿಕಾರಿ.
11. ಶ್ರೀ ಜೆ.ಸಿ. ಕೀರ್ತಿ, ಹಿಂದಿನ ಲೆಕ್ಕ ಪರಿಶೋಧನಾಧಿಕಾರಿ.
12. ಶ್ರೀ ಪಿ.ಜಿ. ಬೋರಗಾವ, ಹಿಂದಿನ ಮುಖ್ಯ ಲೆಕ್ಕಾಧಿಕಾರಿಗಳು, ಜಿ.ಪಂ. ಹಾವೇರಿ.

ಈ ವಿಚಾರಣೆಯನ್ನು 3 ತಿಂಗಳೊಳಗಾಗಿ ನಡೆಸಿ, ವಿಚಾರಣಾಧಿಕಾರಿಗಳು ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ವಿಚಾರಣಾಧಿಕಾರಿಗಳು ಇಲಾಖಾ ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದ ನಂತರ ನಿಯಮಾನುಸಾರ ನಿಗಧಿತ ಸಂಭಾವನೆಯನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಸಿ. ಸುಂದರ**

ಪಿ.ಆರ್. 1073

ಸರ್ಕಾರದ ಅಧಿನ ಕಾರ್ಯದರ್ಶಿ, (ಸೇವೆಗಳು-ಎ)

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ.

## ಕಂದಾಯ ಸಚಿವಾಲಯ

**ವಿಷಯ:** ಶ್ರೀ ಸದಾಶಿವ ಕಲ್ಯಾಣಪುರ, ಹಿಂದಿನ ಉಪತಹಶೀಲ್ದಾರರು ಕಛೇರಿ ಕಾರ್ಕಳ ಹಾಲಿ ನಿವೃತ್ತರು ಇವರ ವಿರುದ್ಧ ಇಲಾಖಾ ವಿಚಾರಣೆ ಜರುಗಿಸುವ ಬಗ್ಗೆ

**ಓದಲಾಗಿದೆ:** ದಿನಾಂಕ:30.11.2005ರ ಜಿಲ್ಲಾಧಿಕಾರಿಗಳ ಪತ್ರ ಸಂಖ್ಯೆ:ಇಎಸ್‌ಟಿ(1)ಸಿಆರ್:6:2004-05

**ಪ್ರಸ್ತಾವನೆ:**

ಶ್ರೀ ಸದಾಶಿವ ಕಲ್ಯಾಣಪುರ, ನಿವೃತ್ತ ತಹಶೀಲ್ದಾರರು ಇವರು ಹಿಂದೆ ಉಪತಹಶೀಲ್ದಾರ್, ತಾಲ್ಲೂಕು ಕಛೇರಿ ಕಾರ್ಕಳ ಆಗಿ ಸೇವೆ ಸಲ್ಲಿಸುತ್ತಿದ್ದ ಅವಧಿಯಲ್ಲಿ ಕಾರ್ಕಳ ಕಸಬಾ ಗ್ರಾಮದ ಸರ್ವೆ ನಂ 175/1 ಮತ್ತು ಇತರೆ ಸ್ಥಳಗಳಲ್ಲಿ ಅಕ್ರಮ ಕಟ್ಟಡ ನಿರ್ಮಿಸಿಕೊಂಡು ಕರ್ನಾಟಕ ಭೂಕಂದಾಯ ಕಾಯಿದೆ ಕಲಂ 94ಸಿ ರಂತೆ ನಮೂನೆ 1ರಲ್ಲಿ ಕಟ್ಟಡ ಸಕ್ರಮಣ ಕೋರಿ ಅರ್ಜಿ ಸಲ್ಲಿಸಿದ್ದ ಪ್ರಕರಣಗಳಲ್ಲಿ ತಮ್ಮ ಅಧಿಕಾರ ವ್ಯಾಪ್ತಿ ಮೀರಿ ಆದೇಶ ಹೊರಡಿಸಿರುವ ಬಗ್ಗೆ ಇವರ ವಿರುದ್ಧ ಶಿಸ್ತು ಕ್ರಮ ಪ್ರಾರಂಭಿಸಬೇಕೆಂದು ಸರ್ಕಾರ ಭಾವಿಸಿರುತ್ತದೆ.

**ಸರ್ಕಾರದ ಆದೇಶ ಸಂಖ್ಯೆ:ಕಂಇ:2:ಎಡಿಎ:2006, ಬೆಂಗಳೂರು, ದಿನಾಂಕ: 11ನೇ ಜುಲೈ 2006**

ಆದುದರಿಂದ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 214ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಸದಾಶಿವ ಕಲ್ಯಾಣಪುರ, ಹಿಂದಿನ ಉಪತಹಶೀಲ್ದಾರರು, ತಾಲ್ಲೂಕು ಕಛೇರಿ ಕಾರ್ಕಳ ಹಾಲಿ ನಿವೃತ್ತರು ಇವರ ವಿರುದ್ಧ ಮೇಲೆ ಹೇಳಿದ ಆರೋಪಗಳ ಬಗ್ಗೆ ಇಲಾಖಾ ವಿಚಾರಣೆ ನಡೆಸಬೇಕೆಂದು ಹಾಗೂ ಈ ವಿಚಾರಣೆಯಲ್ಲಿ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 11 ಮತ್ತು 11ಎ ರಡಿಯಲ್ಲಿ ನಿಗದಿಪಡಿಸಿರುವ ಕಾರ್ಯಬಾರವನ್ನು ಅನುಸರಿಸಬೇಕೆಂದು ಈ ಮೂಲಕ ಆದೇಶಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ಶ್ರೀಮತಿ ಚಂದ್ರಶೇಖರ**

ಪಿ.ಆರ್. 1078

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ. (ಸೇವೆಗಳು-3)

**ವಿಷಯ:** ಶ್ರೀ ಎ.ಎಸ್. ಗುಂಡಕಲ ಚುನಾವಣಾ ತಹಶೀಲ್ದಾರ್ ಜಿಲ್ಲಾಧಿಕಾರಿಗಳ ಕಛೇರಿ, ಬೀದರ್ (ನಿವೃತ್ತ) ಇವರಿಗೆ ಸ್ಥಗಿತ ವೇತನ ಬಡ್ತಿಗಳನ್ನು ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:**
1. ಜಿಲ್ಲಾಧಿಕಾರಿಗಳು ಬೀದರ್‌ರವರ ಪತ್ರ ಸಂಖ್ಯೆ:ಕಂಇ:ಸಿಬ್ಬಂದಿ ರವರ ಪತ್ರ ಸಂಖ್ಯೆ:ಕಂ:ಸಿಬ್ಬಂದಿ:ಜಿಎ:ಸಿಆರ್ :14/04-05, ದಿ:22.12.2005.
2. ಜಿಲ್ಲಾಧಿಕಾರಿಗಳು, ಬೀದರ್ ಇವರ ಪತ್ರ ಸಂಖ್ಯೆ:ಸಿಬ್ಬಂದಿ:ಜಿಎ:ಸಿಆರ್:02/2006-07 ದಿನಾಂಕ:15.5.2006.

**ಪ್ರಸ್ತಾವನೆ:**

ಶ್ರೀ ಎ.ಎಸ್. ಗುಂಡಕಲ, ಚುನಾವಣೆ ತಹಶೀಲ್ದಾರ್ ಬೀದರ್ ಜಿಲ್ಲಾಧಿಕಾರಿಗಳ ಕಛೇರಿ ಇವರಿಗೆ ಸರ್ಕಾರದ ಆದೇಶ ಸಂಖ್ಯೆ: ಆರ್. ಡಿ. 8.ಎ.ಎಸ್.ಡಿ. 2004, ದಿನಾಂಕ:21.4.2004ರನ್ವಯ ದಿನಾಂಕ:1.4.2003ರಿಂದ ಅನ್ವಯವಾಗುವಂತೆ ಮೊದಲನೆ ಸ್ಥಗಿತ ವೇತನ ಬಡ್ತಿಯನ್ನು ರೂ.6000-11200ರ ವೇತನ ಶ್ರೇಣಿಯಲ್ಲಿ ಮಂಜೂರು ಮಾಡಲಾಗಿದೆ ಎಂದು ಸದರಿಯವರಿಗೆ ದಿನಾಂಕ:1.4.2004ರಿಂದ ಎರಡನೇ ಸ್ಥಗಿತ ವೇತನ ಬಡ್ತಿ ದಿನಾಂಕ:1.4.2005ರಿಂದ 3ನೇ ಸ್ಥಗಿತ ವೇತನ ಬಡ್ತಿ ಹಾಗೂ ದಿ:1.4.2006ರಿಂದ ನಾಲ್ಕನೇ ಸ್ಥಗಿತ ವೇತನ ಬಡ್ತಿಗಳನ್ನು ಮಂಜೂರು ಮಾಡುವಂತೆ ಕೋರಿ ಮೇಲೆ ಓದಲಾದ ದಿನಾಂಕ:22.12.2005 ಮತ್ತು 15.5.2006ರ ಪತ್ರಗಳಲ್ಲಿ ಬೀದರ್ ಜಿಲ್ಲಾಧಿಕಾರಿಗಳು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಬೀದರ್ ಜಿಲ್ಲಾಧಿಕಾರಿಗಳ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:43:ಎಎಸ್‌ಡಿ:2005,ಬೆಂಗಳೂರು, ದಿನಾಂಕ: 14ನೇ ಜುಲೈ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಶ್ರೀ ಎ.ಎಸ್. ಗುಂಡಕಲ, ಚುನಾವಣೆ ತಹಶೀಲ್ದಾರ್ ಜಿಲ್ಲಾಧಿಕಾರಿಗಳ ಕಛೇರಿ ಬೀದರ್ ಹಾಲಿ ನಿವೃತ್ತ ಇವರಿಗೆ ವೇತನ ಶ್ರೇಣಿ ರೂ. 6000-11200ರಲ್ಲಿ ಈ ಕೆಳಕಂಡಂತೆ ಸ್ಥಗಿತ ವೇತನ ಬಡ್ತಿಗಳನ್ನು ಮಂಜೂರು ಮಾಡಿದೆ.

1. ದಿ:1.4.2004ರಿಂದ ರೂ.11200+320+320 ದ್ವಿತೀಯ ಸ್ಥಗಿತ ವೇತನ ಬಡ್ತಿ
2. ದಿ:1.4.2005ರಿಂದ ರೂ.11200+320+320+320 ತೃತೀಯ ಸ್ಥಗಿತ ವೇತನ ಬಡ್ತಿ
3. ದಿ:1.4.2006ರಿಂದ ರೂ.11200+320+320+320+320 ನಾಲ್ಕನೇ ಸ್ಥಗಿತ ವೇತನ ಬಡ್ತಿ

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ಶ್ರೀಮತಿ ಚಂದ್ರಶೇಖರ**

ಪಿ.ಆರ್. 1079

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ. (ಸೇವೆಗಳು-3)

## REVENUE SECRETARIAT

**Sub:** Providing infrastructural facility and delegation of powers to the Additional Tahsildar Hubli Taluk.

**Read:** Governnment Order No. RD19 ATS 2006 dated :8.6.2006.

**PREAMBLE:**

In Government Order read above the post of Tahsidar Gas Authority of India Limited Bangalore has been shifted and redesignated as Additional Tahsildar Hubli Taluk in view of public interest and administrative reasons.

Hence the Government have decided to delegate some powers with certain infrastucture to additional Tahsildar Hubli Taluk and hence the following order.

**Government Order No. RD 19 ATS 2006, Bangalore, dated: 15th July 2006**

In exercise of the powers conferred by sub-section (1) of Section-195 of the Karnataka land Revenue Act, 1964 (Karnataka Act 12 of 1964), the Government of Karnataka hereby delegates to the officers specified in Column-2 of the Table below, the powers conferred on it or any officer subordinate to it, specified in column-3 of the said table.

**TABLE**

| Sl. No. | Designation of the Officer | Powers conferred |
|---|---|---|
| 1 | 2 | 3 |
| 1. | Tahsildar, Hubli Taluk, Dharwad District. | 1. Establishment<br>2. Law and order and magisterial<br>3. Election<br>4. Matters connected with land Grant<br>5. Protection of Government Land. Eviction of Un-Authorised Encroachment on Government properties.<br>6. Cases under Karnataka Land Reforms Act, 1961 (79A,80)<br>7. P.D.S. /Food matters |

| 1 | 2 | 3 |
|---|---|---|
| | | 8. Matters connected with Inam Abolition (All types)<br>9. Muzrai subjects<br>10.Implementationof all Developmental& others schemes as assigned by the Government<br>11. Public Grievances<br>12. Issue of SC/STs. Caste Certificate<br>13. D.C.B.<br>14. Natural calamities<br>15. P.T.C.L. matters<br>16. All other Miscellaneous matters |
| 2. | Additional Tahsildar Hubli Taluk, Dharwad District | 1. Maintenance of Records of Rights, 'J' Slips phodi cases & matters under section-127, 128 and 129 of the Karnataka Land Revenue. Act, 1964.<br>2.Sanction of O.A.P. P.H.P, D.W.P. Pensions for freedom Fighters etc.<br>3.Irrigation ,Forest, P.W.D. Food matters.<br>4. Solvency Certificates, Stamp Refund, V.P.C. matters<br>5. Survival certificates<br>6.Miscellaneous Government Dues recovery<br>7. Secretary to Land Tribunel<br>8. Matters under Urban Land Ceiling Act<br>9.Matters connected with Land Acquisition including R.H.S.<br>10.Issue of O.B.C. Caste Certificates its verification<br>11.Issue of Income Certificates /Domicile Certificates. |

Futher the Deputy Commissioner, Dharwad District shall ensure that Additional Tahsildar of Hubli Taluk. Shall share the supporting staff with the existing Tahsildar Hubli Taluk.

By Order and in the name of the Governor of Karnataka,

**R. SREEMATHI CHANDRA SHEKAR**

Under Secretary to Government,

Revenue Department.(Service-3)

P.R. 1080

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಶ್ರೀ ಶಾಂತರಾಜು, ಕೆಎಎಸ್ (ಸೂಪರ್ ಟೈಂ ಸ್ಕೇಲ್) ಅಧಿಕಾರಿ ಮತ್ತು ಶ್ರೀ ಶ್ರೀರಂಗರಾಜು, ನಿವೃತ್ತ ಉಪ ನಿರ್ದೇಶಕರು, ಪದವಿ ಪೂರ್ವ ಶಿಕ್ಷಣ ಇಲಾಖೆ, ಮೈಸೂರು ಇವರುಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆ-ಆರೋಪಮುಕ್ತರನ್ನಾಗಿಸಿ ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:**
1. ನೋಟೀಸ್ ಸಂಖ್ಯೆ:ಸಿಆಸುಇ 138 ಎಸ್ಇಎನ್ 04 ದಿನಾಂಕ:24.11.2004.
2. ಶ್ರೀ ಆರ್. ಶಾಂತರಾಜು, ಕೆಎಎಸ್ ಅಧಿಕಾರಿ ಅವರ ದಿನಾಂಕ:30.12.04ರ ಉತ್ತರ.
3. ಶ್ರೀ ಶ್ರೀರಂಗರಾಜು, ನಿವೃತ್ತ ಉಪ ನಿರ್ದೇಶಕರು, ಪದವಿ ಪೂರ್ವ ಶಿಕ್ಷಣ ಇಲಾಖೆ ಅವರ ದಿನಾಂಕ:23.12.04ರ ಉತ್ತರ.

**ಪ್ರಸ್ತಾವನೆ:**

ಕರ್ನಾಟಕ ರಾಜ್ಯ ವಯಸ್ಕರ ಶಿಕ್ಷಣ ಸಮಿತಿಯ ಪ್ರಧಾನ ಕಾರ್ಯದರ್ಶಿಯಾಗಿ ಶ್ರೀ ಆರ್. ಶಾಂತರಾಜು, ಕೆಎಎಸ್ (ಸೂಪರ್ ಟೈಂ ಸ್ಕೇಲ್) ಅಧಿಕಾರಿ ಅವರು ಕಾರ್ಯನಿರ್ವಹಿಸುತ್ತಿದ್ದಾಗ ಮೈಸೂರು ನಗರದಲ್ಲಿ 1,000 ಅನೌಪಚಾರಿಕಾ ಶಿಕ್ಷಣ ಕೇಂದ್ರ ಪ್ರಾರಂಭಿಸಲು ಅನುಮತಿ ನೀಡಿದ್ದು, ಅವುಗಳ ಪೈಕಿ 413 ಕೇಂದ್ರಗಳನ್ನು ಮಾತ್ರ ಮೈಸೂರಿನಲ್ಲಿ ಪ್ರಾರಂಭಿಸಿ ಉಳಿದ ಕೇಂದ್ರಗಳನ್ನು ಮೈಸೂರು ನಗರವನ್ನು ಬಿಟ್ಟು ಹೊರವಲಯದಲ್ಲಿ ಪ್ರಾರಂಭಿಸಲು ಕ್ರಮ ಕೈಗೊಂಡಿದ್ದು, ಅನುಮತಿ ಪಡೆಯದೇ ಪ್ರಾರಂಭಿಸಿದ ಈ ಕೇಂದ್ರಗಳನ್ನು ಮುಚ್ಚಲು ಕೇಂದ್ರ ಸರ್ಕಾರ ನಿರ್ದೇಶನ ನೀಡಿದ ಕಾರಣ ಆ ಸಂಬಂಧ ರೂ. 12.67 ಲಕ್ಷ ನಷ್ಟ ಉಂಟು ಮಾಡಿದ ಆರೋಪಕ್ಕಾಗಿ ಹಾಗೂ ಶ್ರೀ ಶ್ರೀರಂಗರಾಜು ಅವರು 2000ನೇ ಸಾಲಿನಲ್ಲಿ ಶಿವಗಂಗಾ ವಿದ್ಯಾಪೀಠದ ಪ್ರಾಚಾರ್ಯರ ವಿರುದ್ಧ ಸಾರ್ವಜನಿಕ ದೂರಿನ ಹಿನ್ನೆಲೆಯಲ್ಲಿ ತುಮಕೂರು ಜಿಲ್ಲಾಧಿಕಾರಿಗಳ ವಿದ್ಯಾಪೀಠಕ್ಕೆ ಭೇಟಿ ಕೊಟ್ಟು ನೀಡಿರುವ ವರದಿಯಲ್ಲಿ ಸೂಚಿಸಿರುವಂತೆ ಅಂದಾಜು ರೂ. 50,000/-ಗಳನ್ನು ಸಂಬಂಧಪಟ್ಟವರಿಂದ ವಸೂಲಿ ಮಾಡದೆ ನಷ್ಟವುಂಟಾಗಲು ಕಾರಣರಾದ ಆರೋಪ, ಸಮಿತಿ ಸಭೆಗೆ ಹಾಜರಾದ ಸರ್ಕಾರೇತರ ಸದಸ್ಯರಿಗೆ ಹೆಚ್ಚಿನ ಸಂಭಾವನೆ ನೀಡಿ ರೂ. 1,020/- ನಷ್ಟ ಉಂಟಾಗಲು ಹಾಗೂ ಟೆಂಪೋ ಟ್ರ್ಯಾಕ್ಸ್ ಜೀಪನ್ನು ರೂ.49,500/- ಗಳಿಗೆ ಹರಾಜು ಮಾಡಲಾಗಿದ್ದು, ಈ ಮೊತ್ತವನ್ನು ಸರ್ಕಾರಕ್ಕೆ ಜಮಾ ಮಾಡದೆ ಕರ್ತವ್ಯಲೋಪವೆಸಗಿದ ಆರೋಪಗಳಿಗಾಗಿ ಶ್ರೀ ಶಾಂತರಾಜ್, ಕೆಎಎಸ್ ಅಧಿಕಾರಿ ಹಾಗೂ ಶ್ರೀ ಶ್ರೀರಂಗರಾಜು, ನಿವೃತ್ತ ಉಪ ನಿರ್ದೇಶಕರು ಅವರುಗಳಿಗೆ ಮೇಲೆ (1)ರಲ್ಲಿ

ಓದಲಾದ ದಿ:24.11.04ರ ನೋಟೀಸಿನೊಂದಿಗೆ ದೋಷಾರೋಪಣೆಗಳನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11ರನ್ವಯ ಜಾರಿ ಮಾಡುವುದರ ಮೂಲಕ ಅವರುಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸಲಾಯಿತು.

ನೋಟೀಸಿಗೆ ಶ್ರೀ ಆರ್. ಶಾಂತರಾಜು ಅವರು ದಿ:30.12.04ರಂದು ಉತ್ತರ ಸಲ್ಲಿಸಿ, ಸಮಿತಿ ಬಿಟ್ಟು 9 ವರ್ಷಗಳ ನಂತರ ತಮ್ಮ ಮೇಲೆ ಆರೋಪ ಮಾಡಲಾಗಿದೆಯೆಂದು ತಿಳಿಸಿರುತ್ತಾರೆ. ಕರ್ನಾಟಕ ರಾಜ್ಯ ವಯಸ್ಕರ ಶಿಕ್ಷಣ ಸಮಿತಿಯು ವಯಸ್ಕರ ಶಿಕ್ಷಣದಲ್ಲಿ ಮಾಡಿದ ಅಪೂರ್ವ ಸಾಧನೆಗಳಿಗಾಗಿ 1976ನೇ ಸಾಲಿನ ನೆಹರು ಸಾಕ್ಷರತಾ ಪ್ರಶಸ್ತಿ ಪಡೆದಿರುತ್ತದೆ. ಮೈಸೂರು ನಗರದ 31 ಬ್ಲಾಕ್‌ಗಳಲ್ಲಿ 6 ರಿಂದ 14 ವರ್ಷದ ವಯೋಮಾನದಲ್ಲಿರುವ ಸಾಮಾನ್ಯ ಶಾಲೆಯ ವಿದ್ಯಾಭ್ಯಾಸದಿಂದ ವಂಚಿತರಾದ ಬಡ ಮಕ್ಕಳಿಗೆ ಶಿಕ್ಷಣ ನೀಡಲು ಪ್ರತಿ ಕೇಂದ್ರಕ್ಕೆ ಸುಮಾರು 25 ಮಕ್ಕಳಿರುವ 1000 ಅನೌಪಚಾರಿಕಾ ಶಿಕ್ಷಣ ಕೇಂದ್ರಗಳನ್ನು ಪ್ರಾರಂಭಿಸಲು ಕೇಂದ್ರ ಸರ್ಕಾರದಿಂದ ಮಂಜೂರಾತಿ ಪಡೆಯಲಾಯಿತು. ವಿದ್ಯಾಪೀಠಗಳ ಆಚಾರ್ಯರ ತತ್ಸಮಾನ ಹುದ್ದೆಗಳಲ್ಲಿರುವವರನ್ನು ಈ ಕಾರ್ಯಕ್ರಮದ ಯೋಜನಾಧಿಕಾರಿಗಳನ್ನಾಗಿಯೂ ಇತರೆ ಸಿಬ್ಬಂದಿಯನ್ನು ಮೇಲ್ವಿಚಾರಕರನ್ನಾಗಿಯೂ ನೇಮಿಸಿ ಕಾರ್ಯಕ್ರಮಗಳನ್ನು ಜರುಗಿಸಲಾಯಿತು. ಪ್ರತಿ ಕೇಂದ್ರಕ್ಕೂ ಸಮೀಪವಿರುವ ಅರ್ಹ ಮಕ್ಕಳನ್ನು ಮತ್ತು ಇವರಿಗೆ ಕಲಿಸಲು ಅರ್ಹತೆ-ಆಸಕ್ತಿ ಇರುವ ಬೋಧಕಿ/ಬೋಧಕರನ್ನು ಗುರುತಿಸಿ ಬ್ಯಾಚಿಂಗ್-ಮ್ಯಾಚಿಂಗ್ ಮಾಡುವ ಕೆಲಸ ಮಾಡಲಾಯಿತು. ಹೀಗೆ ಸಮೀಕ್ಷೆ ಮಾಡಿದಾಗ ಮೈಸೂರು ನಗರ ಪ್ರದೇಶದ ವ್ಯಾಪ್ತಿಯಲ್ಲಿ ಸುಮಾರು 500 ಕೇಂದ್ರಗಳನ್ನು ಮಾತ್ರ ಪ್ರಾರಂಭಿಸಲು ಸಾಧ್ಯವೆಂಬ ಅಂಶ ತಿಳಿದು ಬಂತು. ಹೀಗೆ ಸುಮಾರು 500 ಅನೌಪಚಾರಿಕ ಶಿಕ್ಷಣ ಕಾರ್ಯಕ್ರಮ ಕೇಂದ್ರಗಳನ್ನು ಮಾತ್ರ ಪ್ರಾರಂಭಿಸಲು ಮೈಸೂರು ವಿಭಾಗದ ವಿಭಾಗಾಧಿಕಾರಿಗಳಿಗೆ ಹಾಗೂ ಕರ್ನಾಟಕ ರಾಜ್ಯ ವಯಸ್ಕರ ಶಿಕ್ಷಣ ಸಮಿತಿ ಅಧ್ಯಕ್ಷರಿಗೆ ಹಾಗೂ ದಿ:19.12.94ರಂದು ನಡೆದ ಸಮಿತಿಯ ಪದಾಧಿಕಾರಿಯ ಸಭೆಯಲ್ಲಿ ಈ ವಿಷಯವನ್ನು ಮಂಡಿಸಲಾಯಿತೆಂದು ತಿಳಿಸಿರುತ್ತಾರೆ. ಮೈಸೂರು ನಗರ ವ್ಯಾಪ್ತಿಗೆ 1000 ಅನೌಪಚಾರಿಕ ಶಿಕ್ಷಣ ಕೇಂದ್ರಗಳು ಮಂಜೂರಿ ಆಗಿದ್ದರೂ ಸುಮಾರು 500 ಕೇಂದ್ರಗಳನ್ನು ಪ್ರಾರಂಭಿಸಲು ಮಾತ್ರ ಸಾಧ್ಯವಿರುವುದರಿಂದ ಬಾಕಿ ಉಳಿಯುವ ಕೇಂದ್ರಗಳನ್ನು ಇತರೆ ಪ್ರದೇಶಗಳಲ್ಲಿ ಪ್ರಾರಂಭಿಸಲು ಕೇಂದ್ರ ಸರ್ಕಾರದ ಮಂಜೂರಾತಿ ಪಡೆದು ನಂತರ ಪ್ರಾರಂಭಿಸಿದಲ್ಲಿ ಸಮಯ ವ್ಯರ್ಥವಾಗಿ ನಿಗಧಿತ ಅವಧಿಯಲ್ಲಿ ಪೂರ್ಣ ಅನುದಾನವನ್ನು ಬಳಸಿಕೊಳ್ಳಲು ಸಾಧ್ಯವಾಗದಿದ್ದಲ್ಲಿ, 2ನೇ ಕಂತಿನ ಹಣ ಅಪವ್ಯಯವಾಗುವುದೆಂದು ಸಮಿತಿಗೆ ಮನವರಿಕೆಯಾದ್ದರಿಂದ, ಕೇಂದ್ರ ಸರ್ಕಾರದ ಸಮಿತಿಯ ಈ ಸದುದ್ದೇಶವನ್ನು ಪರಿಗಣಿಸಿ ವಿವಿಧ ಪಟ್ಟಣಗಳಲ್ಲಿ ಶಾಲೆಗಳಿಂದ ಹೊರಗುಳಿದ ಬಡವರ ಮಕ್ಕಳ ಶಿಕ್ಷಣಕ್ಕಾಗಿ ಕೇಂದ್ರವು ಘಟನೋತ್ತರ ಮಂಜೂರಾತಿ ನೀಡುತ್ತದೆ ಎಂಬ ಸದಭಿಪ್ರಾಯದಿಂದ ಹಾಗೂ ಸಂಸ್ಥೆಯ ಪದಾಧಿಕಾರರ ಸಮಿತಿಯ ನಿರ್ಣಯದಿಂದ ಇಂತಹ ಕ್ರಮವನ್ನು ಕೈಗೊಳ್ಳಲಾಗಿದೆಯೆಂದು ತಿಳಿಸಿ ಅನೌಪಚಾರಿಕ ಶಿಕ್ಷಣ ಕಾರ್ಯಕ್ರಮ ಮತ್ತು ಇತರೆ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸಿ ಸಂಸ್ಥೆಯ ಪುನರ್‌ಜೀವನಕ್ಕಾಗಿ ಹಗಲಿರುಳು ಶ್ರಮಿಸಿ ಯಾವುದೇ ಹಂತದಲ್ಲಿ ಸಂಸ್ಥೆಯ ಕೆಲಸ ಕಾರ್ಯಗಳನ್ನು ನಿರ್ವಹಿಸುವಲ್ಲಿ ನಿರ್ಲಕ್ಷ್ಯ ತೋರದಿರುವುದರಿಂದ ಹಾಗೂ ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ದಿ:15.7.95ರಂದು ಹಸ್ತಾಂತರಿಸುವವರೆಗೂ ಹಲವು ಬಾರಿ ಅನೌಪಚಾರಿಕಾ ಶಿಕ್ಷಣ ಕಾರ್ಯ ಕೇಂದ್ರಗಳನ್ನು ವಿವಿಧ ಪಟ್ಟಣ ಪ್ರದೇಶಗಳಲ್ಲಿ ತೆಗೆದುಕೊಂಡಿರುವ ಬಗ್ಗೆ ಘಟನೋತ್ತರ ಮಂಜೂರಾತಿ ನೀಡಬೇಕೆಂದು ಕೇಂದ್ರ ಸರ್ಕಾರವನ್ನು ಕೋರಲಾಗಿರುವುದರಿಂದ, ದೋಷಾರೋಪಣೆಯಲ್ಲಿ ನಮೂದಿಸಲಾಗಿರುವ ಹಣವನ್ನು ಯಾರು ವೈಯಕ್ತಿಕ ಲಾಭಕ್ಕಾಗಿ ದುರುಪಯೋಗ ಪಡಿಸಿಕೊಳ್ಳದೇ ಕಡು ಬಡವರ/ನಿರ್ಗತಿಕರ/ವಿದ್ಯಾಭ್ಯಾಸದಿಂದ ವಂಚಿತರಾದ ಮಕ್ಕಳಿಗೆ ಶಿಕ್ಷಣ ನೀಡುವ ಅನೌಪಚಾರಿಕ ಶಿಕ್ಷಣ ಕಾರ್ಯಕ್ರಮಕ್ಕೆ ನಿಯೋಜಿಸಿರುವುದರಿಂದ ತಮ್ಮ ಮೇಲೆ ಮಾಡಿರುವ ಆರೋಪವನ್ನು ಕೈಬಿಟ್ಟು ವಿಚಾರಣೆಯನ್ನು ಮುಕ್ತಾಯಗೊಳಿಸುವಂತೆ ಕೋರಿರುತ್ತಾರೆ.

ಶ್ರೀ ಶ್ರೀರಂಗರಾಜು ಅವರು ದಿ:23.12.04ರಂದು ಸಲ್ಲಿಸಿರುವ ತಮ್ಮ ಉತ್ತರದಲ್ಲಿ ಕರ್ನಾಟಕ ರಾಜ್ಯ ವಯಸ್ಕರ ಶಿಕ್ಷಣ ಸಮಿತಿಗೆ ಸೇರಿದ ಶಿವಗಂಗಾ ವಿದ್ಯಾಪೀಠದ ಪ್ರಾಚಾರ್ಯರ ಬಗ್ಗೆ ಸಾರ್ವಜನಿಕರು ನೀಡಿದ ದೂರಿನ ಹಿನ್ನೆಲೆಯಲ್ಲಿ ತುಮಕೂರು ಜಿಲ್ಲಾಧಿಕಾರಿಗಳು ಭೇಟಿ ನೀಡಿದ ವರದಿಯನ್ನು ಪ್ರಸ್ತಾಪಿಸಿರುವಂತೆ ಆಕ್ಷೇಪಣೆಯಲ್ಲಿಟ್ಟಿದ್ದ ಹಣ ಹಾಗೂ ವಸೂಲಾತಿಗೆ ಸೂಚಿಸಿದ್ದ ಹಣವನ್ನು ಸಂಬಂಧಪಟ್ಟ ನೌಕರರಿಂದ ವಸೂಲಿ ಮಾಡಲು ವಿವಿಧ ವಿಭಾಗಗಳಲ್ಲಿ ಕಡತಗಳು ಚಾಲನೆಯಲ್ಲಿದ್ದವು. ಈ ಸಂದರ್ಭದಲ್ಲಿ ಸರ್ಕಾರವು ವಯಸ್ಕರ ಶಿಕ್ಷಣ ಸಮಿತಿಯನ್ನು ವಿಸರ್ಜನೆ ಮಾಡಿದ್ದರಿಂದ ವರದಿಯ ಬಗ್ಗೆ ಅಂತಿಮ ತೀರ್ಮಾನ ಕೈಗೊಳ್ಳಲು ಸಾಧ್ಯವಾಗಲಿಲ್ಲ. ಸಮಿತಿಯ ಚಟುವಟಿಕೆ ಹಣಕಾಸು ವ್ಯವಹಾರ ಹಾಗೂ ಸಿಬ್ಬಂದಿ ಸೇವಾ ಸವಲತ್ತು ಮತ್ತು ಸಮಿತಿಯ ಆಡಳಿತವನ್ನು ನಿಯಂತ್ರಿಸುವ ಅಧಿಕಾರ ಕಾರ್ಯಕಾರಿ ಸಮಿತಿ ಹಾಗೂ ಕೇಂದ್ರ ಸಮಿತಿಗಿರುತ್ತದೆ. ಈ ಅಂಗ ರಚನೆಯ ಪ್ರಕಾರ ಸಮಿತಿಯ ಪ್ರಧಾನ ಕಾರ್ಯದರ್ಶಿಗಳು ಸಮಿತಿಯ ಹಣಕಾಸಿನ ವ್ಯವಹಾರ ಹಾಗೂ ಆಡಳಿತವನ್ನು ನಿಯಂತ್ರಿಸುವ ಅಧಿಕಾರವಿರುವುದಿಲ್ಲ. ಕಾರ್ಯಕಾರಿ ಸಮಿತಿ ಹಾಗೂ ಕೇಂದ್ರ ಸಮಿತಿಯ ತೀರ್ಮಾನಗಳನ್ನು ಕಾರ್ಯರೂಪಕ್ಕೆ ತರುವುದಷ್ಟೇ ಪ್ರಧಾನ ಕಾರ್ಯದರ್ಶಿಯ ಕರ್ತವ್ಯವಾಗಿರುತ್ತದೆ. ಸಮಿತಿಯ ಸಭೆಗೆ ಹಾಜರಾದ ಸರ್ಕಾರೇತರ ಸದಸ್ಯರಿಗೆ ದಿನಭತ್ಯೆ ಪಾವತಿ ಕುರಿತಂತೆ ದಿ:15.10.99ರಂದು ನಡೆದ ಕಾರ್ಯಕಾರಿ ಸಮಿತಿ ಬರುವ ಸಾಧ್ಯತೆ ಇರುವುದಿಲ್ಲ. ವಿದ್ಯಾಪೀಠದಲ್ಲಿ ಆದ ಆರ್ಥಿಕ ನಷ್ಟವನ್ನು ಶಿಕ್ಷಣ ಇಲಾಖೆ ಸಂಬಂಧಪಟ್ಟವರಿಂದ ವಸೂಲಿ ಮಾಡಿರುವುದಾಗಿ ಕಂಡು ಬರುತ್ತದೆ ಇವರು ಅಧಿಕಾರವನ್ನು ವಹಿಸಿಕೊಳ್ಳುವ ಮುನ್ನವೇ ಸಭಾ ಭತ್ಯೆಯನ್ನು ಪಾವತಿಸಲು ಕ್ರಮ ಕೈಗೊಳ್ಳಲಾಗಿರುವ ಹಾಗೂ ವಾಹನ ಮಾರಾಟದಿಂದ ಬಂದ ಹಣವನ್ನು ಕಾರ್ಯಕಾರಿ ಸಮಿತಿಯ ನಿರ್ಣಯದ ಮೇರೆಗೆ ಸಮಿತಿಯಲ್ಲಿಯೇ ಉಳಿಸಿಕೊಂಡು ಹೊಸ ವಾಹನವನ್ನು ಸಮಿತಿಗೆ ಕೊಳ್ಳಲು ನಿರ್ಧರಿಸಿರುವ ಹಿನ್ನೆಲೆಯಲ್ಲಿ ಅವರನ್ನು ಆರೋಪಮುಕ್ತರನ್ನಾಗಿಸಬೇಕೆಂದು ಕೋರಿರುತ್ತಾರೆ. ಆರೋಪಿತರುಗಳು ಸಲ್ಲಿಸಿರುವ ಉತ್ತರವನ್ನು ಒಪ್ಪಿಕೊಂಡು ಅವರುಗಳನ್ನು ಆರೋಪಮುಕ್ತರನ್ನಾಗಿಸಲು ಸರ್ಕಾರವು ತೀರ್ಮಾನಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 138 ಎಸ್‌ಇಎನ್ 2004, ಬೆಂಗಳೂರು, ದಿನಾಂಕ:15ನೇ ಜುಲೈ 2006**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ, ಸರ್ಕಾರವು ಶ್ರೀ ಆರ್. ಶಾಂತರಾಜು, ಕೆಎಎಸ್ (ಸೂಪರ್ ಟೈಂ ಸ್ಕೇಲ್) ಅಧಿಕಾರಿ ಹಾಗೂ ಶ್ರೀ ಶ್ರೀರಂಗರಾಜು, ನಿವೃತ್ತ ಉಪ ನಿರ್ದೇಶಕರು, ಪದವಿ ಪೂರ್ವ ಶಿಕ್ಷಣ ಇಲಾಖೆ, ಮೈಸೂರು ಅವರುಗಳನ್ನು ದಿ:24.11.04ರ ನೋಟೀಸಿನಲ್ಲಿ ಮಾಡಲಾದ ಆರೋಪಗಳಿಂದ ಆರೋಪಮುಕ್ತರನ್ನಾಗಿಸುತ್ತದೆ.

ಈ ಇಲಾಖಾ ವಿಚಾರಣೆ ನಡೆಯದಿದ್ದಲ್ಲಿ ಅವರುಗಳು ಯಾವ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಿದ್ದರೋ, ಅವುಗಳನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ರಘುರಾಮ್ ಭಂಡಾರಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ. (ಸೇವೆಗಳು-3)

ಪಿ.ಆರ್. 1081

**ವಿಷಯ:** ಶ್ರೀ ಬಿ.ಜಿ.ಮಾಳಗೇರ, ನಿವೃತ್ತ ಮುಖ್ಯ ಇಂಜಿನಿಯರ್ ವಿರುದ್ಧ ನ್ಯಾಯಾಲಯದಲ್ಲಿ ಕ್ರಿಮಿನಲ್ ಮೊಕದ್ದಮೆ ಹೂಡಲು ಸಿಆರ್. ಪಿ.ಸಿ ಕಲಂ 197 ರಂತೆ ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ:**

1. ಮಹಾಲೇಖಾಪಾಲರು, ಬೆಂಗಳೂರು ಇವರ ಪತ್ರ ಸಂಖ್ಯೆ:ಡಿ.ಓ.ನಂ.ಪಿ. ಆರ್.ಎ.ಜಿ. (ಎ.ಯು) 1/ರಿಪೋರ್ಟ್/ಆರ್-1/99-2000/36 ದಿನಾಂಕ:9.9.1999.
2. ವಾಲ್ಮಿ ಸಂಸ್ಥೆಯ ಮೇ 1997 ರಿಂದ ಸೆಪ್ಟೆಂಬರ್ 1998 ರವರೆಗಿನ ಟೆಸ್ಟ್ ಆಡಿಟ್ ರಿಪೋರ್ಟ್.
3. ಸರ್ಕಾರದ ಪತ್ರ ಸಂಖ್ಯೆ:ಐಡಿ 23 ಡಬ್ಲ್ಯೂಎಲ್ಎಂ 2000 ದಿನಾಂಕ:20.10.2000.
4. ವಾಲ್ಮಿ ನಿರ್ದೇಶಕರು, ಗಂಗ ಪೊಲೀಸ್ ಠಾಣೆ, ಧಾರವಾಡದಲ್ಲಿ ದಿನಾಂಕ:11.11.2000 ರಂದು ನೀಡಿದ ದೂರು ಸಂಖ್ಯೆ: WALMI 1- ಕ್ರಿಮಿನಲ್-2000-01-638.
5. ಧಾರವಾಡ ಗ್ರಾಮೀಣ ಉಪ ವಿಭಾಗ ಉಪ ಪೊಲೀಸ್ ಅಧೀಕ್ಷಕರ ಪತ್ರ ಸಂಖ್ಯೆ:2877/2005 ದಿನಾಂಕ:7.12.2005.

**ಪ್ರಸ್ತಾವನೆ:**

ಶ್ರೀ ಬಿ.ಜಿ. ಮಾಳಗೇರ, ನಿವೃತ್ತ ಮುಖ್ಯ ಇಂಜಿನಿಯರ್‌ರವರು ದಿ:12.5.97 ರಿಂದ 29.9.98ರ ಅವಧಿಯಲ್ಲಿ ಧಾರವಾಡದ ಸಂಸ್ಥೆಯಲ್ಲಿ ನಿರ್ದೇಶಕರಾಗಿ ಕಾರ್ಯನಿರ್ವಹಿಸುತ್ತಿದ್ದಾಗ ಅದೇ ಸಂಸ್ಥೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದ ಈ ಕೆಳಕಂಡ ಅಧಿಕಾರಿ ಮತ್ತು ನೌಕರರೊಂದಿಗೆ ಷಾಮೀಲಾಗಿ ವಾವಲ್ಮಿ ಸಂಸ್ಥೆಗೆ ಮಂಜೂರಾಗಿದ್ದ ಸರ್ಕಾರದ ಅನುದಾನದ ಹಣವನ್ನು ದುರುಪಯೋಗಪಡಿಸಿರುವರೆಂದು ಮೇಲೆ (1)ರಲ್ಲಿ ಓದಲಾದ ಮಹಾಲೇಖಪಾಲರ ದಿ:9.9.99ರ ಪತ್ರದಲ್ಲಿ ಸರ್ಕಾರಕ್ಕೆ ವರದಿ ಮಾಡಿರುತ್ತಾರೆ.

1. ಶ್ರಿ ಪಿ.ಎನ್. ಮಹೇಶ್, ಜೂನಿಯರ್ ಇಂಜಿನಿಯರ್
2. ಶ್ರೀ ಕೆ. ಶ್ರೀಪಾದರಾಮ್, ಜೂನಿಯರ್ ಇಂಜಿನಿಯರ್
3. ಶ್ರೀ ಅಬ್ದುಲ್ ಸುಬಾನ್, ದ್ವಿತೀಯ ದರ್ಜೆ ಸಹಾಯಕ (ಉಗ್ರಾಣ ಪಾಲಕ)
4. ಶ್ರೀ ಶಿವಾನಂದ ಫಕೀರಪ್ಪ ಶಿರೇಶಿ, ಕ್ಯಾಶಿಯರ್
5. ಶ್ರೀ ಸಬ್ದುಲ್ ರಹಮಾನ್, ಪ್ರಥಮ ದರ್ಜೆ ಸಹಾಯಕ
6. ಶ್ರೀ ಸಂಗಪ್ಪ ಚನ್ನವೀರಪ್ಪ ಕೊಟ್ಟೂರ ಶೆಟ್ಟರ, ಪ್ರಥಮ ದರ್ಜೆ ಸಹಾಯಕ (ಉಗ್ರಾಣ ಪಾಲಕ)

ಈ ಬಗ್ಗೆ ಮೇಲೆ (2)ರಲ್ಲಿ ಓದಲಾದ ಟೆಸ್ಟ್ ಆಡಿಟ್ ವರದಿಯನ್ನು ಸರ್ಕಾರಕ್ಕೆ ಕಳುಹಿಸಿ ಕೊಟ್ಟಿರುತ್ತಾರೆ. ಸದರಿ ವರದಿಯ ಆಧಾರದಲ್ಲಿ ಮೇಲೆ(3)ರಲ್ಲಿ ಓದಲಾದ ದಿ:20.10.2000ರ ಸರ್ಕಾರದ ನೀರಾವರಿ ಇಲಾಖೆಯ ಪತ್ರದಲ್ಲಿ ಗೌರ್ನಿಂಗ್ ಕೌನ್ಸಿಲ್ ಸಭೆಯಲ್ಲಿ ತೀರ್ಮಾನ ಕೈಗೊಂಡು ಸಂಬಂಧಿಸಿದ ಅಧಿಕಾರಿ/ ನೌಕರರ ವಿರುದ್ಧ ಕ್ರಿಮಿನಲ್ ಮೊಕದ್ದಮೆ ಹೂಡಲು ಜಲ ಮತ್ತು ನೆಲ ನಿರ್ವಹಣೆ ಸಂಸ್ಥೆಯ ನಿರ್ದೇಶಕರನ್ನು ಕೋರಲಾಗಿತ್ತು. ಅದರಂತೆ ವಾಲ್ಮಿ ಸಂಸ್ಥೆಯ ನಿರ್ದೇಶಕರು ಮೇಲೆ (4)ರಲ್ಲಿ ಓದಲಾದ ಪತ್ರದಲ್ಲಿ ದುರುಪಯೋಗವಾದ ಸರ್ಕಾರದ ಹಣ ರೂ. 181.00 ಲಕ್ಷ ಎಂದು ನಮೂದಿಸಿ ಧಾರವಾಡದ ಗರಗ ಪೊಲೀಸ್ ಠಾಣೆಯ ಪೊಲೀಸ್ ಇನ್ಸ್‌ಪೆಕ್ಟರ್‌ರವರಲ್ಲಿ ದೂರನ್ನು ದಾಖಲಿಸಲು ಕೋರಿರುತ್ತಾರೆ. ಮೇಲೆ (5)ರಲ್ಲಿ ಓದಲಾದ ದಿ:7.12.05ರ ಪತ್ರದಲ್ಲಿ ಧಾರವಾಡ ಗ್ರಾಮೀಣ ಉಪ ವಿಭಾಗದ ಪೊಲೀಸ್ ಉಪ ಅಧೀಕ್ಷಕರು ಗರಗ ಪೊಲೀಸ್ ಠಾಣಾ ಗುನ್ನ ನಂ. 07/01 ಕಲಂ 409, 477 (ಎ),420, 109 ಸಹ ಕಲಂ 34 ಐ.ಪಿ.ಸಿ. ನೇದರಲ್ಲಿ ತನಿಖೆ ಕಾಲಕ್ಕೆ ಆರೋಪಿತರಾದ ಶ್ರೀ ಬಿ.ಜಿ. ಮಾಳಿಗೇರ, ನಿವೃತ್ತ ನಿರ್ದೇಶಕರು, ವಾಲ್ಮಿ ಸಂಸ್ಥೆ ಇವರ ಮೇಲೆ ದೋಷಾರೋಪಣೆ ಸಲ್ಲಿಸಲು ಕ್ರಿಮಿನಲ್ ಪ್ರೊಸೀಜರ್ ಕೋಡ್ ಕಲಂ 197ರ ಪ್ರಕಾರ ಸರ್ಕಾರದ ಮಂಜೂರಾತಿ ಆದೇಶ ಕೋರಿರುವರು.

ಈ ಬಗ್ಗೆ ಮೇಲೆ 1 ರಿಂದ 6 ರವರೆಗಿನ ಓದಲಾದ ದಾಖಲೆಗಳನ್ನು ಕೂಲಕಂಷವಾಗಿ ಪರಿಶೀಲಿಸಿದ ಸರ್ಕಾರವು, ಈ ಸಂಬಂಧ ಪೊಲೀಸ್ ಸವಿಸ್ತಾರ ದಪ್ತರ್ ಕಪ್ತಿ, ಪಂಚನಾಮೆ, ಆರೋಪಿತರ ವಿರುದ್ಧ ಅಂತಿಮವಾಗಿ ನಮೂದಿಸಿರುವ ಆರೋಪಗಳ ಪಟ್ಟಿ, ಸಾಕ್ಷಿಗಳ ಪಟ್ಟಿಗಳನ್ನು ಪರಿಶೀಲಿಸಿ ಶ್ರೀ ಬಿ.ಜಿ. ಮಾಳಿಗೇರ, ನಿವೃತ್ತ ನಿರ್ದೇಶಕರು ಇತರರೊಂದಿಗೆ ಷಾಮೀಲಾಗಿ ವಾಲ್ಮಿ ಸಂಸ್ಥೆಯಲ್ಲಿ ಬೃಹತ್ ಪ್ರಮಾಣದ ಅವ್ಯವಹಾರಗಳನ್ನು ಎಸಗಿರುವುದನ್ನು ಗಮನಿಸಿ ಹಾಗೂ ಪ್ರಸ್ತುತ ನಡೆಯುತ್ತಿರುವ ಇಲಾಖಾ ವಿಚಾರಣೆಯ ಜೊತೆಗೆ ಕ್ರಿಮಿನಲ್ ಮೊಕದ್ದಮೆ ಹೂಡುವುದು ಸಮಂಜಸವೆಂದು ಮನಗಂಡು, ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 144 ಎಸ್‌ಇಎನ್ 05, ಬೆಂಗಳೂರು, ದಿನಾಂಕ: 14ನೇ ಜುಲೈ 2006**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಶ್ರೀ ಬಿ.ಜಿ. ಮಾಳಿಗೇರ, ನಿವೃತ್ತ ನಿರ್ದೇಶಕರು, ಜಲ ಮತ್ತು ನೆಲ ನಿರ್ವಹಣೆ ಸಂಸ್ಥೆ, ಧಾರವಾಡ ಇವರನ್ನು ಕ್ರಿಮಿನಲ್ ನ್ಯಾಯಾಲಯದಲ್ಲಿ ಅಭಿಯೋಜನೆಗೊಳಪಡಿಸಲು ಕ್ರಿಮಿನಲ್ ಪ್ರೊಸೀಜರ್ ಕೋಡ್ ಕಲಂ 197ರಡಿ ಧಾರವಾಡ ಜಿಲ್ಲಾ ಪೊಲೀಸ್ ಸೂಪರಿಂಟೆಂಡೆಂಟ್ ರವರಿಗೆ ಈ ಮೂಲಕ ಮಂಜೂರಾತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ರಘುರಾಮ್ ಭಂಡಾರಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ. (ಸೇವೆಗಳು-3)

ಪಿ.ಆರ್. 1082